

# ಚಂದಮಾಮ

ಜೂನ್ 1986



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೨-೫೦

ವಾರ್ಷಿಕ ಚಂದಾ ರೂ. ೩೦.೦೦

ಶಾಲಾ
ಪುಸ್ತಕಗಳ
ಮೇಲೆ
ಹಚ್ಚಿರಿ ಪಾರ್ಲೆ.
ಟಿಫಿನ್
ಡಬ್ಬಿಯೊಳಗೆ
ಹಾಕಿರಿ ಪಾರ್ಲೆ.

PARLE
Melody Chocolate Toffs



PARLE
POPPINS




PARLE Gluco




NAME Bangalore
CLASS ____ DIV. ____
SUBJECT ____
SCHOOL I.I.W.C
PARLE Melody Chocolate Toffs



NAME Bangalore
CLASS ____ DIV. ____
SUBJECT ____
SCHOOL I.I.W.C
PARLE Gluco



NAME Bangalore
CLASS ____ DIV. ____
SUBJECT ____
SCHOOL I.I.W.C
PARLE POPPINS




NAME Bangalore
CLASS ____ DIV. ____
SUBJECT ____
SCHOOL I.I.W.C
PARLE POPPINS




NAME Bangalore
CLASS ____ DIV. ____
SUBJECT ____
SCHOOL I.I.W.C
PARLE Gluco



NAME Bangalore
CLASS ____ DIV. ____
SUBJECT ____
SCHOOL I.I.W.C
PARLE Melody Chocolate Toffs



everest/85/PP/334

# ಚಂದಮಾಮ


ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


ಮಾನವರಿಗೆ ಅಧಿಕಾರ ಪದವಿಗಳು ಬಂದಹಾಗೆ, ಅವರಿಗೆ ತಿಳಿಯದಂತೆಯೇ ದಯೆಯೂ, ಧರ್ಮ ಗುಣವೂ ಅಡಿಯಿಂದ ಇನ್ನೂ ಅಡಿಗೆ ಹೋಗುತ್ತಾ, ಅಹಂಕಾರವು ಮೇಲೆದ್ದು ನಿಲ್ಲುತ್ತದೆ. ಅವರ ಕಡೆಯವರ ಅಹಂಕಾರವು ಅವರಿಗಿಂತಲೂ ಹೆಚ್ಚಾಗುತ್ತದೆ. ಅದರಿಂದ ಸಾಮಾನ್ಯ ಜನರ ಜೀವಿತವು ನರಕಪ್ರಾಯವಾಗುತ್ತದೆ. ಧೈರ್ಯಶಾಲಿಗಳಾದ ಸಾಮಾನ್ಯರಿಂದ ಅಂಥವರ ಅಹಂಕಾರವನ್ನು ಅಡಗಿಸಲು ಸಾಧ್ಯವಿದೆ ಎಂಬುದನ್ನು ಈ ಸಂಚಿಕೆಯಲ್ಲಿರುವ "ಉನ್ನತ ನ್ಯಾಯಾಸ್ಥಾನ" ಎಂಬ ಕಥೆ ತಿಳಿಸುತ್ತದೆ.

## ಅಮರವಾಣಿ

ಸದ್ವಿದ್ಯಾ ಶಕ್ಯತೇ ಲಬ್ಧುಂ ಗುರೂಣಾ ಮುಪದೇಶತಃ
ಶೀಲಂ ಸ್ವಾಭಾವಿಕಂ ತತ್ತು ಲಭ್ಯತೇ ನೋಪದೇಶತಃ

ಗುರುವಿನ ಬೋಧನೆಯಿಂದ ಉತ್ತಮ ವಿದ್ಯೆಯನ್ನು ಪಡೆಯಬಹುದು. ಆದರೆ ಉತ್ತಮ ಸ್ವಭಾವವನ್ನು ಮಾತ್ರ ಬರಿಯ ಬೋಧನೆಯಿಂದ ಪಡೆಯಲು ಸಾಧ್ಯವಿಲ್ಲ.


ಸಂಪುಟ : ೭೬ ಜೂನ್ '೮೬ ಸಂಚಿಕೆ : ೬

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦




**ಪುರಾಣ ಗಾಥಾವಳಿ :**

# ದುರ್ಮದ

ದೇವೇಂದ್ರನ ಸಭಾಸ್ಥಾನದ ಅಪ್ಸರಸಿಯರಲ್ಲಿ ಊರ್ವಶಿ ಮುಖ್ಯದವಳು. ಅವಳ ಸೌಂದರ್ಯಾತಿಶಯವನ್ನು ನೋಡಿ ದುರ್ಮದನೆಂಬ ಗಂಧರ್ವನು ಅವಳನ್ನು ಮದುವೆಯಾಗಬೇಕೆಂದುಕೊಂಡನು. ಆದರೆ ಊರ್ವಶಿ ಅದಕ್ಕೆ ಸಮ್ಮತಿ ಕೊಡಲಿಲ್ಲ.

ಊರ್ವಶಿ ಚಂದ್ರವಂಶದ ರಾಜನಾದ ಪುರೂರವ ಚಕ್ರವರ್ತಿಯನ್ನು ಮದುವೆ ಮಾಡಿಕೊಳ್ಳಲು ನಿಶ್ಚಯಿಸಿಕೊಂಡಳು. ಒಂದು ದಿನ ಹುಣ್ಣಿಮೆಯ ರಾತ್ರಿ ಊರ್ವಶಿ ಪುರೂರವನನ್ನು ಸಂಧಿಸಲು, ನಂದನವನದಲ್ಲಿದ್ದ ಒಂದು ಹೊನ್ನೇ ಮರದ ಕೆಳಗೆ ಚಂದ್ರಶಿಲಾ ಫಲಕದ ಮೇಲೆ ಕುಳಿತುಕೊಂಡು ಪ್ರಿಯನಿಗಾಗಿ ನಿರೀಕ್ಷಿಸತೊಡಗಿದಳು.

ಈ ಸಂಗತಿಯನ್ನು ಕಂಡುಹಿಡಿದ ದುರ್ಮದನು ಇದೇ ಒಳ್ಳೆಯ ಸಮಯವೆಂದುಕೊಂಡು ಪುರೂರವ ಚಕ್ರವರ್ತಿಯ ರೂಪಧರಿಸಿ ಊರ್ವಶಿಯ ಹತ್ತಿರ ಬಂದನು. ಅವಳು ಮುಗುಳ್ನಗುತ್ತ ಮಾತಾಡಿಸಿದ ಕೂಡಲೇ ಅವನು ಅವಳ ಕೊರಳಿಗೆ ಹೂವಿನ ಮಾಲೆ ಹಾಕಿದನು. ಇಬ್ಬರೂ ಸಂತೋಷದಿಂದ ಮಾತಾಡತೊಡಗಿದರು.

ಸ್ವಲ್ಪ ಹೊತ್ತಿಗೆ ನಿಜ ಪುರೂರವನು ಅಲ್ಲಿಗೆ ಬಂದನು. ಅವನನ್ನು ನೋಡಿ ಪುರೂರವನ ರೂಪದಲ್ಲಿರುವ ದುರ್ಮದನು ಎಗತಾಳಿಯಾಗಿ ನಕ್ಕನು. ಅದನ್ನು ನೋಡಿ ದುರ್ಮದನ ಮೋಸವನ್ನು ಅರಿತ ಊರ್ವಶಿ ಕೋಪದಿಂದ ಅವನನ್ನು "ನೀನು ರಾಕ್ಷಸನಾಗು !" ಎಂದು ಶಪಿಸಿದಳು.

ತನ್ನ ತಪ್ಪನ್ನು ಕ್ಷಮಿಸಿ ಶಾಪವನ್ನು ಉಪಸಂಹರಿಸಿಕೊಳ್ಳುವಂತೆ ದುರ್ಮದನು ಊರ್ವಶಿಯನ್ನು ಬೇಡಿಕೊಂಡನು. ಆಗ ಊರ್ವಶಿ, "ಭೂಲೋಕದಲ್ಲಿ ಮಾನವನಾಗಿ ಹುಟ್ಟಿ ಯುದ್ಧದಲ್ಲಿ ದುರ್ಮರಣ ಹೊಂದಿ ಶಾಪದಿಂದ ಮುಕ್ತನಾಗು" ಎಂದು ಶಾಪವನ್ನು ತುಸು ಬದಲಾಯಿಸಿದಳು.





# ಪುಣ್ಯಫಲ

ಒಂದು ಕಾಲದಲ್ಲಿ ಕೌಮುದೀ ರಾಜ್ಯದಲ್ಲಿ ಶಾಂತಿ ವನವೆಂಬಲ್ಲಿ ಜೀವಾನಂದನೆಂಬೊಬ್ಬ ಋಷಿ ವಾಸವಾಗಿದ್ದನು. ಪ್ರಬೋಧನೆಂಬವನು ಆ ಋಷಿಯ ಶಿಷ್ಯ. ಗುರುವಿನ ಬಾಯಿಯಿಂದ ಹೊರಡುವ ಒಂದೊಂದು ಮಾತೂ ಬಹು ಮಹತ್ವದ್ದೆಂದು ಆ ಶಿಷ್ಯನು ತಿಳಿಯುತ್ತಿದ್ದನು. ಗುರುವಿನ ಒಳ್ಳೆಯ ಶಿಕ್ಷಣವೂ ಇದ್ದುದರಿಂದ, ಪ್ರಬೋಧನು ವೇದ ವೇದಾಂತಗಳನ್ನೆಲ್ಲಾ ಬಹು ಚೆನ್ನಾಗಿ ಅಭ್ಯಾಸ ಮಾಡಿಕೊಂಡಿದ್ದನು.

ಋಷಿ ಜೀವಾನಂದನು ಆಗಾಗ ಕಾಶೀ ವಿಶ್ವೇಶ್ವರನನ್ನು ಕುರಿತು ಹೇಳುವುದುಂಟು. ವಿಶ್ವೇಶ್ವರನ ದರ್ಶನದಿಂದ ಲಭಿಸುವ ಪುಣ್ಯಫಲವು ಬಹು ದೊಡ್ಡದೆಂದು ಅವನ ಮಾತಿನಿಂದ ಗೊತ್ತಾಗುತ್ತಿತ್ತು. ಆದುದರಿಂದ ಪ್ರಬೋಧನಿಗೆ ಕಾಶೀ ವಿಶ್ವೇಶ್ವರನ ದರ್ಶನ ಮಾಡಬೇಕೆಂಬ ಅಭಿಲಾಷೆ ಬಲವಾಗುತ್ತಾ ಹೋಯಿತು.

ಅದನ್ನು ಅರಿತುಕೊಂಡ ಜೀವಾನಂದನು ಒಂದು ದಿನ ಹಾಗೆಯೇ ಕಾಶಿಗೆ ಹೋಗಿ ಬರುವಂತೆ ಪ್ರಬೋಧನಿಗೆ ಅಪ್ಪಣೆ ಕೊಟ್ಟು ಆಶೀರ್ವದಿಸಿ ಕಳುಹಿಸಿದನು.

ಪ್ರಬೋಧನು ಕಾಶಿಯ ದಾರಿ ಹಿಡಿದು ಕೆಲವು ದಿನ ಪ್ರಯಾಣ ಮಾಡಿದ ಮೇಲೆ ಒಂದು ಕಾಲಿನ ಚೆಪ್ಪಲಿ ಹರಿದುಹೋಯಿತು. ಆಗ ಸ್ವಲ್ಪ ದೂರದಲ್ಲಿ ಆಲದ ಮರದ ಕೆಳಗೆ ಕುಳಿತಿದ್ದ ಮೋಚ್ಚಿಗಾರನೊಬ್ಬನನ್ನು ನೋಡಿದನು. ಇದೊಂದು ದೇವರ ದಯವೇ ಎಂದುಕೊಂಡು ಪ್ರಬೋಧನು ಅವನ ಬಳಿಗೆ ಹೋಗಿ ಹರಿದ ಚೆಪ್ಪಲಿಯನ್ನು ಸರಿಮಾಡುವಂತೆ ಅವನ ಮುಂದಿಟ್ಟನು.

ಆ ಮೋಚ್ಚಿಗಾರನ ಹೆಸರು ಕಾಳಿದಾಸ. ಅವನು ಪ್ರಬೋಧನ ಚೆಪ್ಪಲಿಯನ್ನು ಹೊಲಿಯುತ್ತಾ, "ಅಯ್ಯಾ, ತಾವು ಬಹಳ ದೂರದಿಂದ ಬರುವಂತೆ ಕಾಣುತ್ತದೆ. ತಮ್ಮ ಪ್ರಯಾಣವು ಎಲ್ಲಿಯವರೆಗೆ ?" ಎಂದು ಕೇಳಿದನು.

"ನಾನು ಕೌಮುದೀ ರಾಜ್ಯದವನು. ಕಾಶೀ ವಿಶ್ವೇಶ್ವರನನ್ನು ದರ್ಶನ ಮಾಡಲು ಹೋಗುತ್ತಿದ್ದೇನೆ" ಎಂದನು ಪ್ರಬೋಧ.

ಆ ಮಾತು ಕೇಳಿದ ಕೂಡಲೇ ಕಾಳಿದಾಸನ ಕಣ್ಣುಗಳು ಪ್ರಕಾಶಿಸಿದುವು. "ಆಹಾ! ಕಾಶೀ ವಿಶ್ವೇಶ್ವರನ ದರ್ಶನವೆಂದರೆ ಸಾಮಾನ್ಯದ ಮಾತೇ ?

ಎನ್. ಎಸ್. ನಾಗೇಶ್ವರರಾವ್



ಅದು ಎಲ್ಲರಿಗೂ ಬಾರುವಂತಹುದಲ್ಲಪ್ಪ! ತಮ್ಮ ಅದೃಷ್ಟವು ಬಹಳ ದೊಡ್ಡದು" ಎಂದನು.

ಹೊಲಿದ ಚಪ್ಪಲಿಯನ್ನು ಮೆಟ್ಟಿಕೊಂಡು ಪ್ರಬೋಧನು ಅವನಿಗೆ ಒಂದು ಬೆಳ್ಳಿಯ ನಾಣ್ಯವನ್ನು ಕೊಡಲು ನೀಡಿದನು. ಅವನು ಅದನ್ನು ತೆಗೆದುಕೊಳ್ಳದೆ ಕೈಮುಗಿದು, "ಅಯ್ಯಾ, ನನ್ನ ಹೆಸರು ಕಾಳಿದಾಸ. ತಾವು ವಿಶ್ವೇಶ್ವರನನ್ನು ದರ್ಶನ ಮಾಡಿದ ಮೇಲೆ ನನ್ನ ಹೆಸರು ಹೇಳಿ ಆ ಬೆಳ್ಳಿ ನಾಣ್ಯವನ್ನು ಹುಂಡಿಯೊಳಗೆ ಹಾಕಿಬಿಡಿರಿ" ಎಂದು ಅಪೇಕ್ಷಿಸಿದನು,

ಪ್ರಬೋಧನು ಅದಕ್ಕೆ ಒಪ್ಪಿ, ಈ ಸಂಗತಿ ಮರೆಯದಂತಿರಲು, ಆ ಬೆಳ್ಳಿ ನಾಣ್ಯವನ್ನು ಶಾಲುವೆಯ ತುದಿಯಲ್ಲಿ ಕಟ್ಟಿಟ್ಟುಕೊಂಡು, ಮುಂದೆ ದಾರಿ ಸಾಗಿಸಿದನು.

ಹಾಗೆ ನಡೆಯುತ್ತ ಒಂದು ಕಾಡಿನ ನಡುವಿನಿಂದಾಗಿ ಹೋಗುತ್ತಿರಲು ಅಗ್ನಿಶಿಖನೆಂಬ ಕಳ್ಳನು ಕುದುರೆಯ ಮೇಲೆ ಅವನಿಗೆ ಇದಿರಾಗಿ ಬಂದನು. ಅವನು ಪ್ರಬೋಧನನ್ನು ನೋಡಿದ ಕೂಡಲೇ, ಹೂಂಕರಿಸಿ "ಎಲೋ ನಿಲ್ಲಲ್ಲೇ. ಒಳ್ಳೆಯ ಮಾತಿನಲ್ಲಿ ನಿನ್ನ ಹತ್ತಿರ ಇರುವ ಹಣವನ್ನೆಲ್ಲಾ ತೆಗೆದು ಅಲ್ಲಿಡು! ತಪ್ಪಿದರೆ ನಾನು ಸಾಮಾನ್ಯನಲ್ಲ. ಜೀವ ತೆಗೆದೇನು!" ಎಂದನು ಕಣ್ಣು ತಿರುಗಿಸಿ.

ಪ್ರಬೋಧನು ದಾರೀ ಖರ್ಚಿಗಾಗಿ ಇಟ್ಟುಕೊಂಡಿದ್ದ ನೂರು ವರಹಗಳನ್ನೂ ಕಳ್ಳನಿಗೆ ಕೊಟ್ಟುಬಿಟ್ಟನು. ಆ ಸಮಯದಲ್ಲಿ ಅಗ್ನಿಶಿಖನ ತೀಕ್ಷ್ಣ ದೃಷ್ಟಿ ಪ್ರಬೋಧನ ಶಾಲುವೆಯ ತುದಿಯ ನಾಣ್ಯದ ಗಂಟಿನ ಮೇಲೆ ಬಿತ್ತು. ಅದೇನೋ ಬೆಲೆ ಬಾಳುವ ವಸ್ತುವಾಗಿರಬೇಕೆಂದುಕೊಂಡನು.

"ಶಾಲುವೆಯ ತುದಿಯಲ್ಲಿ ಅದೇನು ಕಟ್ಟಿದ್ದೀ? ಚಿನ್ನವೇ?!" ಎಂದು ಗರ್ಜಿಸಿ ಕೇಳಿದನು ಅಗ್ನಿಶಿಖ.

ಪ್ರಬೋಧನು ಆ ಗಂಟುಬಿಚ್ಚಿ ಬೆಳ್ಳಿ ನಾಣ್ಯವನ್ನು ಅಗ್ನಿಶಿಖನಿಗೆ ತೋರಿಸುತ್ತ, "ದಯಮಾಡಿ ಇದನ್ನು ಮಾತ್ರ ಕೇಳಬೇಡ. ಏಕೆಂದರೆ ಇದು ನನ್ನದಲ್ಲ. ಕಾಶೀ ವಿಶ್ವೇಶ್ವರನ ಹುಂಡಿಯೊಳಗೆ ಹಾಕುವಂತೆ ಕಾಳಿದಾಸನೆಂಬ ಒಬ್ಬ ಮೊಚ್ಚಿಗಾರನು ಇದನ್ನು ಕೊಟ್ಟಿದ್ದಾನೆ. ಅದಕ್ಕೇ ಇದನ್ನು ಪ್ರತ್ಯೇಕವಾಗಿ ಕಟ್ಟಿಕೊಂಡಿದ್ದೇನೆ" ಎಂದು ಹೇಳಿದನು.

ಅದನ್ನು ಕೇಳಿ ಅಗ್ನಿಶಿಖನು ಆಲೋಚನೆಗೆ ಬಿದ್ದನು. ಚಪ್ಪಲಿ ಹೊಲಿದು ಅರೆಹೊಟ್ಟೆ ತಿಂದು ಜೀವಿಸುವ ನಿರ್ಭಾಗ್ಯದವನೇ ಬೆಳ್ಳೀ ನಾಣ್ಯ ಕೊಟ್ಟಿದ್ದಾನೆ! ತನ್ನ ಮುಂದೆ ಅವನೆಷ್ಟರವನು?

ಹೀಗೆಂದುಕೊಂಡು ಅಗ್ನಿಶಿಖನು ತಾನು ತೆಗೆದುಕೊಂಡ ನೂರು ವರಹಗಳನ್ನೂ ಪ್ರಬೋಧನಿಗೇ ಕೊಟ್ಟು, "ನನ್ನ ಹೆಸರು ಅಗ್ನಿಶಿಖ. ನನ್ನ ಹೆಸರು ಹೇಳಿ ಈ ಹಣವನ್ನು ವಿಶ್ವೇಶ್ವರನ ಹುಂಡಿಯೊಳಗೆ ಹಾಕು" ಎಂದು ಹೇಳಿ, ತನ್ನ ದಾರಿ ಹಿಡಿದು ಹೋಗಿಬಿಟ್ಟನು.



ಆ ಹಣ ತನ್ನದೇ ಆದರೂ ಕಳ್ಳನು ತನ್ನಿಂದ ಸಂಪಾದಿಸಿದ ಆ ಹಣ ಈಗ ಆ ಕಳ್ಳ, ಅಗ್ನಿಶಿಖಿನದೇ ಆಗಿದೆ! ತಾನು ಮುಟ್ಟುವಂತಿಲ್ಲ, ಎಂದು ಕೊಂಡನು ಪ್ರಬೋಧ.

ಮುಂದೆ ಪ್ರಬೋಧನು ಒಂದು ತಿಂಗಳು ಪ್ರಯಾಣ ಮಾಡಿದ ಮೇಲೆ, ಗಾಢವಾದೊಂದು ಅರಣ್ಯದೊಳಗೆ ಪ್ರವೇಶಿಸಬೇಕಾಯಿತು. ಆ ಅರಣ್ಯ ದಲ್ಲಿ ರುಧಿರವರ್ಣನೆಂಬ ಬ್ರಹ್ಮರಾಕ್ಷಸನಿದ್ದನು. ಅವನು ಪ್ರಬೋಧನನ್ನು ನೋಡಿದ ಕೂಡಲೇ ದೊಡ್ಡ ದನಿಯಿಂದ ಬೊಬ್ಬಿಡುತ್ತ ಅವನನ್ನು ಹಿಡಿದುಕೊಂಡನು.

ಪ್ರಬೋಧನು ಭೀತಿಯಿಂದ ಗಡಗಡ ನಡುಗುತ್ತ, "ಹೇ, ರಾಕ್ಷಸೋತ್ತಮಾ! ಒಂದು ಮಾತು! ನಾನು ಕಾಶೀ ವಿಶ್ವೇಶ್ವರನ ದರ್ಶನಕ್ಕೆ ಹೊರಟ ವನು. ಅದೊಂದೇ ಆಗಿದ್ದರೆ ನಿನಗೆ ಅಡ್ಡಿಮಾಡದೆ ಆಹಾರವಾಗುತ್ತಿದ್ದೆನು. ಆದರೆ ದಾರಿಯಲ್ಲಿ ಮೆಟ್ಟು ಹೊಲಿಯುವ ಕಾಳಿದಾಸನೆಂಬವನೊಬ್ಬ, ಕಾಶೀ ವಿಶ್ವೇಶ್ವರನಿಗೆ ಸಮರ್ಪಿಸಲು ಒಂದು ಬೆಳ್ಳಿ ನಾಣ್ಯ ಕೊಟ್ಟಿದ್ದಾನೆ. ಹಾಗೆಯೇ ಒಬ್ಬ ಕಳ್ಳ ನನ್ನ ಹಣ ವನ್ನೇ ತೆಗೆದುಕೊಂಡು, ನನಗೆ ಕೊಟ್ಟು ಸ್ವಾಮಿಗೆ ಕಾಣಿಕೆ ಕೊಡಬೇಕೆಂದು ಹೇಳಿದ್ದಾನೆ. ಈಗ ನಾನು ನಿನಗೆ ಆಹಾರವಾಗಿಬಿಟ್ಟರೆ, ಆ ಪುಣ್ಯ ಕಾರ್ಯ ಗಳನ್ನು ಮಾಡದೇ ಬಿಟ್ಟ ಶಾಪವು ನನಗೆ ತಗಲು ತ್ತದೆ. ಅದು ನಿನಗೂ ತಟ್ಟಬಹುದು. ದಯಮಾಡಿ ನನ್ನನ್ನು ಹೋಗಲು ಬಿಟ್ಟರೆ, ಹಿಂದಿರುಗಿ ಹೋಗು ವಾಗ ತಪ್ಪದೆ ನಿನಗೆ ಆಹಾರವಾಗುತ್ತೇನೆ. ಈಗ ಈ ಪುಣ್ಯಗಳ ಭಾರ ಕಳೆದುಕೊಂಡು ಒರಲು ನನಗೆ ಬಿಡಯ್ಯ. ನಿನಗೂ ಪುಣ್ಯ" ಎಂದನು.

ಬ್ರಹ್ಮರಾಕ್ಷಸ ರುಧಿರವರ್ಣನಿಗೆ ಪ್ರಬೋಧನು ಸತ್ಯವನ್ನೇ ಹೇಳುವನೆಂಬ ನಂಬುಗೆಯುಂಟಾದುದ ರಿಂದ, ಅವನನ್ನು ಹೋಗಲು ಬಿಟ್ಟುಬಿಟ್ಟನು.

ಆಮೇಲೆ ಪ್ರಬೋಧನು ಅರಣ್ಯದಿಂದ ಹೊರ ಬಿದ್ದು, ಪ್ರಯಾಣ ಸಾಗಿಸಿ ಒಂದು ದಿನ ಕಾಶೀ ನಗರವನ್ನು ತಲಪಿದನು. ಅಲ್ಲಿ ಅವನು ವಿಶ್ವೇಶ್ವರ ಸ್ವಾಮಿಯ ದರ್ಶನಮಾಡಿ, ಪ್ರದಕ್ಷಿಣೆ ನಮಸ್ಕಾರ ಗಳನ್ನು ಮುಗಿಸಿ, ಕಾಳಿದಾಸನು ಕೊಟ್ಟ ಬೆಳ್ಳಿ ನಾಣ್ಯ ಮತ್ತು ಕಳ್ಳ ಅಗ್ನಿಶಿಖನು ತಿರುಗಿಕೊಟ್ಟ ಕೆಲವು ವರಹಗಳನ್ನೂ ಹುಂಡೀಯೊಳಗೆ, ಅವರ ಹೆಸರು ಗಳನ್ನು ಪತ್ಯ ಪ್ರತ್ಯೇಕವಾಗಿ ಹೇಳಿಯೇ ಹಾಕಿದನು.

ಆಮೇಲೆ ಅಲ್ಲಿಂದ ಹಿಂದಿರುಗಿ ಪ್ರಯಾಣವನ್ನು ಮಾಡುತ್ತ, ಅರಣ್ಯದೊಳಗೆ ಪ್ರವೇಶಮಾಡಿ ಬ್ರಹ್ಮ ರಾಕ್ಷಸ ರುಧಿರವರ್ಣನಿಗೆ ಬಲಿಯಾಗಲು ತಯಾ ರಾದನು. ಆಗ ಅರಣ್ಯದೊಳಗೆ ಒಬ್ಬ ಬೇಡರವನು ಇದಿರಾದನು. ಬ್ರಹ್ಮರಾಕ್ಷಸನು ತಿರುಗಾಡುವ ಅರಣ್ಯದಲ್ಲಿ ಒಬ್ಬ ಬೇಡರವನು ನಿರ್ಭಯದಿಂದ ಸಂಚರಿಸುವುದನ್ನು ನೋಡಿ ಪ್ರಬೋಧನಿಗೆ ಎಲ್ಲಿಲ್ಲದ ಆಶ್ಚರ್ಯವಾಯಿತು.

ಆ ಬೇಡರವನು ಪ್ರಬೋಧನನ್ನು ನೋಡಿದ ಕೂಡಲೇ ಭಕ್ತಿಯಿಂದ ಪ್ರಬೋಧನಿಗೆ ನಮಸ್ಕಾರ ಮಾಡಿ, "ಮಹಾನುಭಾವಾ, ನಾನೇ ಬ್ರಹ್ಮರಾಕ್ಷಸನಾದ ರುಧಿರವರ್ಣ. ನಿಮ್ಮನ್ನು ಕೊಂದು ತಿನ್ನದೆ, ಕಾಶೀ ವಿಶ್ವನಾಥನ ಸಂದರ್ಶನಕ್ಕಾಗಿ ನಿಮ್ಮನ್ನು ಬಿಟ್ಟದ್ದರಿಂದ ನನಗೆ ಲಭ್ಯವಾದ ಪುಣ್ಯಫಲವೇ, ಜನ್ಮಗಳಲ್ಲೆಲ್ಲಾ ಉತ್ತಮವಾದ ಈ ಮಾನವಜನ್ಮ. ನಾನು ಧನ್ಯನಾದೆನು ಸ್ವಾಮೀ" ಎಂದನು.

ಪ್ರಬೋಧನು ರುಧಿರವರ್ಣನನ್ನು ಆಶೀರ್ವಾದ ಮಾಡಿ ಮುಂದೆ ಹೋದನು. ಒಂದು ಕಡೆಯಲ್ಲಿ ಕೆಲವು ಮಂದಿ ಆಟವಿಕರು ಗುಂಪಾಗಿರುವುದು ಕಂಡಿತು. ಅವರೆಲ್ಲ ಢಕ್ಕೆ, ತಮ್ಮಟೆಗಳನ್ನು ಬಾರಿಸುತ್ತ ಏನೋ ಹಬ್ಬದ ಗೌಜೆಯಲ್ಲಿದ್ದರು. ಅವನು ಅವರ ಬಳಿಗೇ ಹೋದನು. ಆ ಗುಂಪಿನ ನಡುವೆ ಒಬ್ಬನು ಬಿದಿರುಗಳಿಂದ ಮಾಡಲ್ಪಟ್ಟು, ಹೂವುಗಳಿಂದ ಅಲಂಕರಿಸಲ್ಪಟ್ಟ ಒಂದು ಉನ್ನತಾಸನದ ಮೇಲೆ ಕುಳಿತುಕೊಂಡಿದ್ದನು. ಅವನ ತಲೆಯ ಮೇಲೆ ಪರಿಮಳ ಬೀರುವ ಪುಷ್ಪಗಳ ಸುಂದರವಾದ ದೊಡ್ಡ ಕಿರೀಟವಿದ್ದಿತು.

ಅವನು ಪ್ರಬೋಧನನ್ನು ನೋಡಿದ ಕೂಡಲೇ ಎದ್ದು ಬಂದು ಅವನಿಗೆ ನಮಸ್ಕಾರ ಮಾಡಿ, "ಸ್ವಾಮೀ! ನಾನು ಅಗ್ನಿಶಿಖಿನು. ಈ ಆಟವಿಕರು ತಮ್ಮ ರಾಜನನ್ನು ಆರಿಸಲು ತಮ್ಮ ಸಾಂಪ್ರದಾಯದ ಪ್ರಕಾರ ಗಿಳಿಯನ್ನು ಹಾರಿಸಿದರು. ಅದು ಬಂದು ನನ್ನ ತಲೆಯ ಮೇಲೆ ಎರಗಿತು. ಅಡವಿ ಜಾತಿಯವರೆಲ್ಲರೂ ಕೂಡಿ ನನ್ನನ್ನು ತಮ್ಮ ರಾಜನಾಗಿ ಮಾಡಿದರು. ಇದೆಲ್ಲಾ ನಿಮ್ಮಿಂದ ನನಗೆ ಬಂದ ಕಾಶೀ ವಿಶ್ವೇಶ್ವರನ ದರ್ಶನದ ಪುಣ್ಯಫಲವೇ ಎನ್ನಲು ಸಂದೇಹವಿಲ್ಲ, ನೀವು ಬಹು ದೊಡ್ಡ ಪುಣ್ಯಾತ್ಮರು ಸ್ವಾಮಿ" ಎಂದನು.

ಅಲ್ಲಿ ಒಂದು ಹೊತ್ತಿನವರೆಗೆ ಪ್ರಬೋಧನು ಅಗ್ನಿಶಿಖಿನ ಅತಿಥಿಯಾಗಿದ್ದು, ಮತ್ತೆ ಅಲ್ಲಿಂದ ಹೊರಟು ಮೊಚ್ಚೆಗಾರ ಕಾಳಿದಾಸನಿರುವ ಗ್ರಾಮದ ಹತ್ತಿರ ಬಂದನು.



ಹಿಂದೆ ಮೋಚಿಗಾರನು ಕುಳಿತಿದ್ದ ಆಲದ ಮರದ ಆಚೆಗೆ ಚಪ್ಪಲಿಗಳ ಅಂಗಡಿಯೊಂದು ಕಾಣಿಸಿತು. ಅಂಗಡಿಯಲ್ಲಿ ಉತ್ತಮ ಬಟ್ಟೆ ಬರೆ ಧರಿಸಿಕೊಂಡು ಕುಳಿತಿದ್ದವನು ಯಜಮಾನನಂತೆ ಕಂಡನು.

ಪ್ರಬೋಧನು ಅವನ ಹತ್ತಿರ ಹೋಗಿ, "ಅಯ್ಯಾ, ಈ ಪ್ರಾಂತದಲ್ಲಿ ಕಾಳಿದಾಸನೆಂಬ ಮೆಟ್ಟು ಹೊಲಿಯುವವನೊಬ್ಬನಿರಬೇಕು. ನಿಮಗೆ ಅವನನ್ನು ಕುರಿತು ಗೊತ್ತಿದೆಯೆ? ಎಲ್ಲಿದ್ದಾನೆ?" ಎಂದು ಕೇಳಿದನು.

ಕೂಡಲೇ ಆ ಮನುಷ್ಯ ಪ್ರಬೋಧನಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಎದ್ದು ಕೈ ಜೋಡಿಸಿ, "ಸ್ವಾಮಿ, ಆ ಕಾಳಿದಾಸನು ನಾನೇ. ಕೆಲವು ತಿಂಗಳ ಹಿಂದೆ ಮಹಾರಾಜರು ಈ ದಾರಿಯಾಗಿ ಹೋಗುತ್ತ, ನನ್ನ ಚಪ್ಪಲಿಗಳ ಅಂದಚೆಂದಗಳನ್ನು ನೋಡಿ ತೆಗೆದುಕೊಂಡರು, ಆ ದಿನದಿಂದ ನನ್ನ ಜಾತಕವೇ ಬದಲಾಗಿ ಹೋಯಿತು. ಈಗ ರಾಜ್ಯದೊಳಗಿನ ಪ್ರಮುಖರೆಲ್ಲಾ ನಾನು ತಯಾರಿಸಿ ಕೊಡುವ ಚಪ್ಪಲಿಗಳನ್ನೇ ಕೊಂಡುಕೊಳ್ಳುತ್ತಾರೆ. ಇದೆಲ್ಲಾ ನನ್ನ ಪ್ರಯತ್ನವಲ್ಲ, ನಿಮ್ಮಿಂದ ಬಂದ ಕಾಶೀ ವಿಶ್ವೇಶ್ವರ ಸ್ವಾಮಿಯ ದರ್ಶನದ ಪುಣ್ಯ ಫಲ!" ಎಂದನು.

ತನ್ನ ಕಾರಣದಿಂದ ಮೂವರಿಗೆ ಬಹುಬೇಗದಲ್ಲೇ ಪುಣ್ಯಫಲವು ದಕ್ಕಿ ಅವರ ಪರಿಸ್ಥಿತಿ ಪರಿವರ್ತನೆಗೊಂಡು ಪ್ರಕಾಶಿಸಿದ್ದನ್ನು ನೋಡಿ ಪ್ರಬೋಧನಿಗೆ ಬಹಳ ಸಂತೋಷವಾಯಿತು. ಆದರೆ ತನ್ನ ಪರಿಸ್ಥಿತಿ ಏನು? ಸ್ವತಃ ಕಾಶೀ ವಿಶ್ವೇಶ್ವರನನ್ನು ದರ್ಶನಮಾಡಿರುವ ತನಗೆ ಸ್ವಲ್ಪ ಮಾತ್ರ ಪುಣ್ಯ ಫಲವೂ ದಕ್ಕಿರುವಂತೆ ಕಾಣುವುದಿಲ್ಲ. ತಾನು ಮತ್ತೆ ಶಾಂತಿವನವನ್ನು ಸೇರಿ ಗುರು ಶುಶ್ರೂಷೆ ಮಾಡುತ್ತ ಹೀಗೆಯೇ ಕಾಲ ಕಳೆಯಬೇಕಾಗಿದೆ.

ಹೀಗೆ ಯೋಚಿಸುತ್ತಾ, ಪ್ರಬೋಧನು ಶಾಂತಿವನಕ್ಕೆ ಹಿಂದಿರುಗಿ ಬಂದು ಸೇರಿದನು. ಗುರು ಜೀವಾನಂದನೊಂದಿಗೆ ನಡೆದ ಸಮಾಚಾರವನ್ನೆಲ್ಲಾ ಹೇಳಿ, ತನಗೆ ಬಂದ ಅನುಮಾನವನ್ನೂ ಬಯಲಿಗಿಟ್ಟನು.





ಜೀವಾನಂದನು ಅವನು ಹೇಳಿದುದನ್ನು ಕೇಳಿದ ಮೇಲೆ, "ಪ್ರಬೋಧಾ, ನೀನು ದಾರಿ ಖರ್ಚಿಗಾಗಿ ಸ್ವಲ್ಪ ಧನವನ್ನು ಇಟ್ಟುಕೊಂಡಿದ್ದಿಯಷ್ಟೆ? ಅದನ್ನೆಲ್ಲ ಕಳ್ಳ ಅಗ್ನಿಶಿಖನು ದೋಚಿಕೊಂಡನು. ಹಾಗಾದರೆ ನೀನು ಕಾಶಿಗೆ ಸೇರುವವರೆಗೂ ನಿನ್ನ ಹಸಿವೆಯನ್ನು ಅಡಗಿಸಿಕೊಳ್ಳಲು ಏನು ಮಾಡಿದಿ?" ಎಂದು ಕೇಳಿದನು.

"ಗುರುದೇವಾ, ನಾನು ಕಾಶೀ ನಗರವನ್ನು ಸೇರುವವರೆಗೂ ಅಗ್ನಿಶಿಖನು ಕೊಟ್ಟ ಹಣದಲ್ಲಿ ಚಿಕ್ಕಾಸನ್ನೂ ಖರ್ಚು ಮಾಡಲಿಲ್ಲ. ಅರಣ್ಯ ಪ್ರಾಂತದಲ್ಲಿ ನಡೆಯುವಾಗ ಕಂದಮೂಲ, ಕಾಯಿ ಚಿಗುರುಗಳನ್ನೂ, ಏನೋ ಹಣ್ಣುಗಳನ್ನೂ ತಿಂದು ಹಸಿವೆ ತಣಿಸಿಕೊಂಡೆನು. ಗ್ರಾಮಗಳಲ್ಲಿ ಪ್ರಯಾಣ ಮಾಡುವಾಗ ಯಾರ ಮನೆಯಲ್ಲಾದರೂ ಆತಿಥ್ಯ ದೊರಕುತ್ತಿತ್ತು. ಕಾಶಿಗೆ ಪ್ರವೇಶಮಾಡಿದ ಮೇಲೆಯೇ ಅಗ್ನಿಶಿಖನು ಕೊಟ್ಟುದರಲ್ಲಿ ಸ್ವಲ್ಪ ಹಣ ಖರ್ಚು ಮಾಡಬೇಕಾಯಿತು" ಎಂದನು ಪ್ರಬೋಧ.

"ಹಾಗಾಗಲು ಕಾರಣವೇನು?" ಎಂದು ಜೀವಾನಂದನು ಪ್ರಶ್ನಿಸಿದನು.

"ನಗರದಲ್ಲಿ ಕೆಲವರು ತೀರ್ಥಯಾತ್ರಿಕರು ಕೂಡಿದರು. ಅವರು ಒಂದು ಧರ್ಮ ಛತ್ರದಿಂದ ಮತ್ತೊಂದು ಕಡೆಗೆ ಹೋಗುತ್ತಿದ್ದರು. ಹಾಗೇಕೆಂದು ಕೇಳಿದೆನು. ಆ ಛತ್ರದಲ್ಲಿ ಭೋಜನ ವಸತಿ ಸೌಕರ್ಯಗಳು ಸರಿಯಾಗಿಲ್ಲವೆಂದೂ, ಮತ್ತೊಂದು ಕಡೆಯಲ್ಲಿರುವ ವಸತಿ ಗೃಹದಲ್ಲಿ ಸ್ವಲ್ಪ ಹಣ ತೆಗೆದುಕೊಂಡು ಒಳ್ಳೆಯ ಸೌಕರ್ಯಗಳನ್ನು ಕಲ್ಪಿಸುವವರೆಂದೂ ಹೇಳಿ, ನನ್ನನ್ನು ಸಹಾ ಬರುವಂತೆ ಪ್ರೋತ್ಸಾಹಪಡಿಸಿದರು. ಅವರೊಂದಿಗೆ ನಾನೂ ಆ ವಸತಿ ಗೃಹಕ್ಕೆ ಹೋದೆನು. ಅದರ ಯಜಮಾನನಿಗೆ ಸ್ವಲ್ಪ ಹಣ ಕೊಡಬೇಕಾಗಿ ಬಂತು. ಅಗ್ನಿಶಿಖನು ವಿಶ್ವೇಶ್ವರನ ಹುಂಡಿಗೆ ಹಾಕಲು ಕೊಟ್ಟ ನೂರು ವರಹಗಳಲ್ಲಿ ಸ್ವಲ್ಪ ಹಾಗೆ ಖರ್ಚಾಗಿ ಹೋಯಿತು" ಎಂದನು ಪ್ರಬೋಧ.

ಜೀವಾನಂದನು ಮುಗುಳು ನಗುತ್ತ, "ಪ್ರಬೋಧಾ, ಅದೇ ನೀನು ಮಾಡಿದ ತಪ್ಪು. ಅಗ್ನಿಶಿಖನು ಕಳ್ಳ. ಕಳ್ಳತನವೇ ಅವನ ವೃತ್ತಿ. ನಿನ್ನ ಹತ್ತಿರವಿದ್ದ ಹಣವನ್ನೂ ದೋಚಿಕೊಂಡ ಕೂಡಲೇ ಅದೆಲ್ಲಾ ಅವನದೇ ಆಯಿತು. ಅದನ್ನು ಅವನಾಗಿ ಅಪೇಕ್ಷೆಪಟ್ಟು, ವಿಶ್ವೇಶ್ವರನ ಹುಂಡಿಗೆ ಹಾಕಲು ನಿನಗೆ ಕೊಟ್ಟನು. ಹಾಗೆ ನಿನ್ನದಲ್ಲದ ಆ ಧನದಲ್ಲಿ ನೀನು ಸ್ವಲ್ಪ ಖರ್ಚು ಮಾಡಿರುವಿ. ಈಗ ಆ ಮೂವರಿಗೂ ಲಭಿಸಿದ ಪುಣ್ಯ ಫಲವೂ ನಿನಗೆ ಲಭಿಸಲಿಲ್ಲವೆಂದು ನೊಂದುಕೊಳ್ಳುತ್ತೀ. ಅದು ಕೂಡಾ ತಪ್ಪು!" ಎಂದನು ಜೀವಾನಂದ.

"ಅದು ತಪ್ಪೆನ್ನುವಿರಾ? ಹೇಗೆ ತಪ್ಪೆಂದು ವಿವರಿಸುವಿರಾ ಸ್ವಾಮಿ?" ಎಂದನು ವಿನಯದಿಂದ ಪ್ರಬೋಧ.

ಜೀವಾನಂದನು ಒಂದೆರಡು ಕ್ಷಣ ತಡೆದು, ಪ್ರಬೋಧನ ಭುಜವನ್ನು ತಟ್ಟಿ, "ಮರದ ಬುಡದಲ್ಲಿ ಕುಳಿತು, ಮಳೆ, ಚಳಿ, ಬಿಸಿಲುಗಳನ್ನು ಸಹಿಸಿಕೊಳ್ಳುತ್ತ ಮೆಟ್ಟುಹೊಲಿದು ಬದುಕು ಸಾಗಿಸುವ ಕಾಳಿದಾಸನು ಪರಮ ದರಿದ್ರನು. ಅವನಿಗೆ ತತ್ ಕ್ಷಣದಲ್ಲೇ ಪುಣ್ಯಫಲವು ಲಭಿಸಿದೆ. ಅಗ್ನಿಶಿಖನು ದಾರಿದೋಚಿ ಬದುಕುವ ಕ್ರೂರಕರ್ಮಿ. ಕೇಳಿದ ಕೂಡಲೇ ಹಣ ಕೊಡದವರನ್ನು ಕೊಲ್ಲಲಿಕ್ಕೂ ಅವನು ಹಿಂಜರಿಯುವವನಲ್ಲ. ಅವನಿಗೆ ಪುಣ್ಯ ಫಲವು ಕೂಡಲೇ ಲಭಿಸಿದೆ. ಅವನು ಒಳ್ಳೆಯ ಮಾರ್ಗಕ್ಕೆ ಬಾರದೆ ಹೋದರೆ ಎಷ್ಟೋ ಪಾಪದವರಿಗೆ ಯಮನಾಗಿಯೇ ಇರುತ್ತಾನೆ. ಇನ್ನು ಬ್ರಹ್ಮರಾಕ್ಷಸ ರುಧಿರವರ್ಣನಂತೂ ಬಹು ಭಯಂಕರನಾದ ರಾಕ್ಷಸ. ಹಸಿವೆ ತೀರಿಸಿಕೊಳ್ಳುವುದೇ ಅವನಿಗೆ ಎಲ್ಲಕ್ಕೂ ಮುಖ್ಯವಾಗಿದೆ. ಆದುದರಿಂದ ಅವನು ಕಂಡ ಯಾವನನ್ನಾದರೂ ನಿರ್ದಾಕ್ಷಿಣ್ಯದಿಂದ ತಿನ್ನುವನು. ಅವನಿಗೆ ಪುಣ್ಯಫಲವು ತತ್ ಕ್ಷಣದಲ್ಲೇ ಲಭಿಸಿದುದರಿಂದ ಬಹುದೊಡ್ಡ ಒಳ್ಳೆಯದೇ ನಡೆದಿದೆ. ಹೀಗೆ ಅನೇಕರ ರಕ್ಷಣೆಯಾಗಿದೆ. ಅರ್ಥವಾಯಿತೇ ಪ್ರಬೋಧಾ?" ಎಂದು ಕೇಳಿದನು.

"ಅರ್ಥವಾಯಿತು ಗುರುದೇವಾ. ಆದರೆ ನನಗೊಂದು ಸಂದೇಹ. ತುಂಬಾ ಮಾರ್ಗಾಯಾಸಪಟ್ಟು, ಶ್ರಮಗಳನ್ನೆಲ್ಲ ಸಹಿಸಿಕೊಂಡು ಕಾಶೀ ವಿಶ್ವೇಶ್ವರನ ದರ್ಶನಮಾಡಿರುವ ನಾನು ಸ್ವಲ್ಪ ಮಾತ್ರ ಪುಣ್ಯಕ್ಕೂ ಅರ್ಹನಾಗಲಾರೆನೇ?" ಎಂದು ಕೇಳಿದನು ಪ್ರಬೋಧ.

"ಏಕಾಗಲಾರೆ ಪ್ರಬೋಧಾ? ಒಬ್ಬ ದಾರಿದ್ರ್ಯ ಪೀಡಿತನೂ, ಒಬ್ಬ ಕಳ್ಳನೂ, ಒಬ್ಬ ರಾಕ್ಷಸನೂ ಪಡೆದಂತೆ ನೀನು ಮರುಕ್ಷಣದಲ್ಲೇ ಪುಣ್ಯ ಫಲವನ್ನು ಪಡೆಯಬೇಕಾದ ಅಗತ್ಯವೇನೂ ಇಲ್ಲ. ನಿನಗೆ ದಾರಿದ್ರ್ಯದ ಬಾಧೆ ಇಲ್ಲ. ನೀನು ಯಾರಿಗೂ ಕೇಡು ಬಗೆಯುವವನೂ ಅಲ್ಲ. ಕ್ರೂರಿಯೂ ಅಲ್ಲ. ಇನ್ನೂ ವಿದ್ಯಾರ್ಥಿಯಾದ ನೀನು, ವಿಶ್ವೇಶ್ವರನನ್ನು ದರ್ಶನ ಮಾಡಿದ ಪುಣ್ಯಫಲವನ್ನು ಮುಂದೆ ತಪ್ಪದೆ ಅನುಭವಿಸುವಿ" ಎಂದು ಜೀವಾನಂದನು ಪ್ರಬೋಧನಿಗೆ ಆಶೀರ್ವಾದ ಮಾಡಿದನು.

ಮುಂದೆ ಕಾಲಕ್ರಮದಲ್ಲಿ ಋಷಿ ಜೀವಾನಂದನ ವಾಕ್ಯವು ಫಲಿಸಿತು. ಪ್ರಬೋಧನು ಜೀವಾನಂದನಿಂದ ಸಕಲ ಶಾಸ್ತ್ರಗಳನ್ನೂ ಕಲಿತು ಕೌಮುದೀ ರಾಜ್ಯದಲ್ಲಿ ಸಾಟಿಯಿಲ್ಲದ ಪಂಡಿತನೆನಿಸಿ ಸುಖ್ಯಾತನಾದನು.

ಅದನ್ನು ಕೇಳಿ ರಾಜನು ಅವನನ್ನು ಆಹ್ವಾನಿಸಿ ರಾಜಗುರುವಿನ ಪದವಿಯನ್ನು ಅವನಿಗೇ ಕೊಟ್ಟು ಸನ್ಮಾನ ಮಾಡಿದನು.



# ಆಧಿಕ್ಯತೆ

**ಗೋ**ಪಾಲಪುರದ ಗ್ರಾಮಸ್ಥರಿಗೆ ತಮ್ಮ ಊರಲ್ಲಿರುವ ರಾಮ ದೇವಾಲಯವನ್ನು ದುರಸ್ತಿ ಮಾಡಬೇಕೆಂಬ ಅಪೇಕ್ಷೆಯುಂಟಾಯಿತು. ಅದಕ್ಕೆ ಹಣ ಸಂಗ್ರಹಿಸಬೇಕಾಗಿತ್ತು.

ಅದನ್ನು ತಿಳಿದು ಗ್ರಾಮದ ಹಿರಿಯ ಗೋವಿಂದಯ್ಯನು ಅವರೊಂದಿಗೆ, "ನಾವು ಒಂದು [illegible] ಗಾಯನ ಕಚೇರಿಗೆ ಏರ್ಪಾಡು ಮಾಡೋಣ. ಕೇಳಲು ಬಂದವರಿಂದ ಚಂದಾ ರೂಪದಲ್ಲಿ ಸ್ವಲ್ಪ ಹಣ ಬರ ಮಾಡಿಕೊಳ್ಳಬಹುದು" ಎಂದನು.

ಆ ಗ್ರಾಮದಲ್ಲಿ ಶಾಸ್ತ್ರೀಯ ಸಂಗೀತ ಕಲಿತ ಸಾರಂಗಪಾಣಿ ಎಂಬ ಯುವಕನೂ, ಸೋಮದತ್ತನೆಂಬ ವೈಣಿಕನೂ ಇದ್ದರು. ಅವರಿಗೆ ಕಚೇರಿ ಮಾಡಿದುದಕ್ಕೆ ಗೌರವಸೂಚಕವಾಗಿ ನೂರ ಹದಿನಾರು ರೂಪಾಯಿ ಕೊಡೋಣವೆಂಬ ನಿರ್ಣಯವಾಯಿತು. ಅದಕ್ಕೆ ಸಾರಂಗಪಾಣಿ ಕೂಡಲೇ ಒಪ್ಪಿದನು.

ಸೋಮದತ್ತನು ಮಾತ್ರ "ಅದೇನು? ವಿದ್ವತ್ತಿನಲ್ಲಿ ಆ ಹುಡುಗನೂ ನಾನೂ ಒಂದೇ ಏನು? ಅವನಿಗಿಂತ ನನ್ನ ಆಧಿಕ್ಯತೆ ನಾಲ್ಕು ಮಂದಿಗೆ ತಿಳಿಯುವ ಹಾಗೆ ನನಗೆ ಅವನಿಗೆ ಕೊಡುವುದಕ್ಕಿಂತಲೂ ಒಂದು ರೂಪಾಯಿ ಹೆಚ್ಚಿಗೆ ಕೊಡಬೇಕು" ಎಂದನು.

ಗೋವಿಂದಯ್ಯ ಅದಕ್ಕೆ ಸರಿಯೆಂದರು.

ಒಂದು ವಾರದ ಮೇಲೆ ಗಾಯನ ಕಚೇರಿ ಏರ್ಪಾಡಾಯಿತು. ಕಚೇರಿ ಮುಗಿದ ಮೇಲೆ ಗೋವಿಂದಯ್ಯ ಅಲ್ಲಿ ಸೇರಿದವರೊಂದಿಗೆ, "ಮಹಾಜನರೇ, ಸಾರಂಗಪಾಣಿಗೆ ಕೊಡುವ ಪಾರಿತೋಷಿಕಕ್ಕಿಂತಲೂ ತನಗೆ ಒಂದು ರೂಪಾಯಿ ಹೆಚ್ಚಿಗೆ ಬೇಕೆಂದು ಸೋಮದತ್ತರು ಕೇಳಿದ್ದಾರೆ. ದೇವರ ಕಾರ್ಯವಾದುದರಿಂದ ತನಗೆ ಪಾರಿತೋಷಕವೇನೂ ಬೇಡವೆಂದು ಸಾರಂಗಪಾಣಿ ಹೇಳಿದ್ದಾನೆ. ಆದುದರಿಂದ ಸೋಮದತ್ತರಿಗೆ ಈ ಒಂದು ರೂಪಾಯಿ ಕೊಡುತ್ತೇನೆ" ಎಂದನು.

ಸೋಮದತ್ತನು ಕಿಂಕಂ ಅನ್ನದೆ ತಲೆ ತಗ್ಗಿಸಿಕೊಂಡು ಗೋವಿಂದಯ್ಯ ಕೊಟ್ಟ ರೂಪಾಯಿಯನ್ನು ಪಡೆದುಕೊಂಡನು.






ನರ್ಮದಾ ನದಿಯ ತೀರದಲ್ಲಿ ಧವಳಗಿರಿ ಎಂಬ ರಾಜ್ಯವು ಒಂದು ಕಾಲದಲ್ಲಿ ಪ್ರಸಿದ್ಧವಾಗಿದ್ದಿತು. ತಾರಕೇಶ್ವರನೆಂಬ ರಾಜನು ಅದನ್ನು ಪರಿಪಾಲನೆ ಮಾಡಿಕೊಂಡಿದ್ದನು. ಆ ಮಹಾರಾಜನಿಗೆ ಇಬ್ಬರು ಕುಮಾರರಿರುವರು.

ಹಿರಿಯ ಕುಮಾರನ ಹೆಸರು ಶೂರಸೇನ. ಅವನಿಗೆ ಇಪ್ಪತ್ತೈದು ವರ್ಷ ವಯಸ್ಸಾಗಿತ್ತು. ಚಿಕ್ಕವನಾದ ಚಿತ್ರಸೇನನಿಗೆ ಹದಿನೆಂಟು ವರ್ಷ ಪ್ರಾಯ. ಚಿಗುರು ಮಾಸೆಯ ತಾರುಣ್ಯದವನು. ವಯಸ್ಸಿಗೆ ತಕ್ಕಂತೆ ಆಟ ಓಟ ಬೇಟೆಗಳಲ್ಲಿ ಹೆಚ್ಚಿನ ಉತ್ಸಾಹದವನು.

ಒಂದು ದಿನ ಬೆಳಿಗ್ಗೆ ಈ ಇಬ್ಬರು ರಾಜಕುಮಾರರೂ, ತಮ್ಮ ಪರಿವಾರದವರನ್ನು ಹಿಂದಿಟ್ಟುಕೊಂಡು ವಿನೋದವಾಗಿ ಬೇಟೆಯಾಡಲು ಅಡವಿಗೆ ಹೋದರು. ಅಡವಿಯಲ್ಲಿ ಸ್ವಲ್ಪದೂರ ಹೋದ ಮೇಲೆ ತುಸುದೂರದಲ್ಲಿರುವ ಒಂದು ಜಿಂಕೆಯ ಮಂದೆಯನ್ನು ನೋಡಿದರು.

ರಾಜಕುಮಾರರಿಬ್ಬರೂ ತಮ್ಮ ತಮ್ಮ ಕುದುರೆಗಳನ್ನು ತಟ್ಟಿಹುರುಡಿಸಿ ಆ ಜಿಂಕೆಗಳ ಗುಂಪಿನ ಕಡೆಗೆ ಬಾಣಗಳನ್ನು ಪ್ರಯೋಗಿಸುತ್ತ ಓಡಿಸಿಕೊಂಡು ಹೋಗತೊಡಗಿದರು. ಹಾಗೆ ಓಡುವ ಹುಮ್ಮಸ್ಸಿನಲ್ಲಿ ತಮ್ಮ ಪರಿವಾರದಿಂದ ಬೇರ್ಪಟ್ಟು ದಿಕ್ಕುಗಳ ಪರಿವೆಯಿಲ್ಲದೆ ಕಾಡಿನಲ್ಲಿ ಬಹಳ ದೂರದ ವರೆಗೆ ಓಡಿದರು.

ಜಿಂಕೆಗಳನ್ನು ಓಡಿಸುತ್ತಾ ಹೋಗುವ ರಾಜಕುಮಾರರಿಗೆ ಹಠಾತ್ತಾಗಿ ದೊಡ್ಡದೊಂದು ಪೊದರುಗಳಾಚೆಯಿಂದ ಸಿಂಹವು ಗರ್ಜಿಸಿದ ಧ್ವನಿ ಕೇಳಿಸಿತು. ರಾಜಕುಮಾರರಿಬ್ಬರೂ ಆ ಗರ್ಜನೆ ಕೇಳಿದ ದಿಕ್ಕನ್ನು ನೋಡಿ ಬಿಲ್ಲಿಗೆ ಬಾಣತಗಲಿಸುವಷ್ಟರೊಳಗೆ ಎರಡು ಸಿಂಹಗಳು ಗರ್ಜಿಸುತ್ತ ಅವರ ಕಡೆಗೆ ಹಾರಿದುವು. ಸಿಂಹಗಳನ್ನು ನೋಡಿದ ಕೂಡಲೇ ರಾಜಕುಮಾರರ ಕುದುರೆಗಳು ಹೆದರಿ ಹಿಂದಿರುಗಿ ಹುಚ್ಚು ಹಿಡಿದಂತೆ ವೇಗವಾಗಿ ಓಡತೊಡಗಿದುವು.



ರಾಜಕುಮಾರರಲ್ಲಿ ಚಿಕ್ಕವನಾದ ಚಿತ್ರಸೇನನು ಏರಿಕೊಂಡ ಕುದುರೆ, ಯಜಮಾನನು ಎಷ್ಟು ಬಲವಾಗಿ ಕಡಿವಾಣ ಎಳೆದರೂ ನಿಲ್ಲದೆ, ಮರಗಳ ಸಂದುಗೊಂದುಗಳಿಂದಾಗಿ ಶರವೇಗದಿಂದ ಓಡುತ್ತ ಸ್ವಲ್ಪ ಹೊತ್ತಿಗೆ ಒಂದಾನೊಂದು ಗುಡ್ಡದ ಇಳಿಜಾರಿನಲ್ಲಿ ಹೊರಳಿಬಿದ್ದು ಮೂಗು ಬಾಯಿಗಳಿಂದ ನೊರೆಯುಗುಳುತ್ತಾ ಪ್ರಾಣಬಿಟ್ಟು ಅಚಲವಾಯಿತು. ಕುದುರೆಯೊಂದಿಗೆ ಹೊರಳಿಬಿದ್ದ ಚಿತ್ರಸೇನನು ಎದ್ದು ಬರುವಾಗ ಕುದುರೆ ಸತ್ತಿರುವುದನ್ನು ನೋಡಿ ಹತಾಶನಾದನು.

ಆಗಲೇ ಚಿತ್ರಸೇನನು ತುಂಬಾ ದಣಿದು ಹೋಗಿದ್ದನು. ಅವನು ತನ್ನ ಅಣ್ಣನೆಲ್ಲಿರುವನೆಂದು ನಾಲ್ಕು ದಿಕ್ಕುಗಳನ್ನೂ ಪರಿಕಿಸಿ ನೋಡಿದನು. ಸಮೀಪದಲ್ಲೆಲ್ಲಿಯೂ ಅಣ್ಣನ ಜಾಡು ಕಾಣಿಸಲಿಲ್ಲ. ಪರಿವಾರದವರೂ ಕಾಣಲಿಲ್ಲ. ತಾನು ಅವರನ್ನೆಲ್ಲ ಬಿಟ್ಟು ದಿಕ್ಕು ತಪ್ಪಿ ಬಹಳ ದೂರ ಬಂದಿರುವೆನೆಂದು ತಿಳಿದುಕೊಂಡನು. ಆ ಪ್ರಾಂತದಲ್ಲೆಲ್ಲಾ ಆಕಾಶವನ್ನು ಮುಚ್ಚಿದಿಸುವಂತಹ ದೊಡ್ಡ ದೊಡ್ಡ ಮರಗಳಿಂದ ಕತ್ತಲೆಯಾಗಿ ಕಾಣುತ್ತಿತ್ತು. ಮರಗಳ ಕೊಂಬೆಗಳಲ್ಲಿ ಕೋತಿಗಳೂ, ಬಗೆಬಗೆಯ ಪಕ್ಷಿಗಳೂ, ಬಳ್ಳಿಗಳ ಹಾಗೆ ನೇತಾಡುವ ಹೆಬ್ಬಾವುಗಳೂ, ಸರ್ಪಗಳೂ ಅವನಿಗೆ ಕಂಡವು. ನರ ಸಂಚಾರಕ್ಕೆ ಯೋಗ್ಯವಲ್ಲದ ಭೀಕರವಾದ ಸ್ಥಳವಾಗಿತ್ತು ಅದು. ಯಾವ ದಿಕ್ಕಿಗೆ ಹೋಗಬೇಕೋ ತಿಳಿಯಲಿಲ್ಲ.

ತಾನು ಅನಾಥನಂತೆ ನಿಂತಿರುವ ಆ ಪ್ರಾಂತವನ್ನು ನೋಡಿ ಚಿತ್ರಸೇನನಿಗೆ ಭಯವಾಗತೊಡಗಿತು. ತಾನು ತನ್ನ ಪರಿವಾರಕ್ಕೆ ಮಾತ್ರವಲ್ಲದೆ, ಮಾನವ ನಿವಾಸಗಳಿರುವ ಪ್ರಾಂತಕ್ಕೆ ಕೂಡಾ ಬಹು ದೂರನಾಗಿ ಹೋದಂತೆ ಅವನಿಗೆ ತೋರಿತು. ತನ್ನ ಧವಳಗಿರಿ ನಗರವನ್ನು ತಾನು ಸೇರಬೇಕಾದರೆ ಕಾಲ್ನಡಿಗೆಯಿಂದಲೇ ಹೋಗಬೇಕಿತ್ತು. ಆ ನಗರವು ಯಾವ ದಿಕ್ಕಿನಲ್ಲಿದೆಯೋ ಗೊತ್ತಾಗುತ್ತಿದ್ದಿಲ್ಲ. ಕೇಳುವುದು ಯಾರನ್ನು? ಕಿವಿ ತುಂಬಾ ಜಿರ್ರೋ ಎಂಬ ಎಂಥದೋ ಕೀಟಗಳ ಶಬ್ದ.

ಚಿತ್ರಸೇನನು ತನ್ನ ವಿಷಾದ ಪರಿಸ್ಥಿತಿಗೆ ಮರುಗುತ್ತಾ, ಮೆಲ್ಲನೆ ಕದಲಿ ದೇವರ ಮೇಲೆ ಭಾರ ಹಾಕಿ ಕಾಡಿನೊಳಗೆ ಒಂದು ದಿಕ್ಕನ್ನು ಹಿಡಿದು ಸ್ವಲ್ಪ ದೂರ ನಡೆದನು. ಆಗ ಚಿಕ್ಕ ಚಿಕ್ಕ ದಿಣ್ಣೆ ಗುಪ್ಪೆಗಳಿಂದಲೂ ಪೊದರುಗಳಿಂದಲೂ ಕೂಡಿದ ಒಂದು ಬೆಟ್ಟ ಅವನಿದಿರು ನಿಂತಿರುವುದು ಕಂಡಿತು. ಆ ಬೆಟ್ಟದ ಬುಡದಲ್ಲಿ ಅಗಲಕಿರಿದಾದ ನದಿಯೊಂದು ಹರಿಯುತ್ತಿದ್ದಿತು.

ಆ ನದಿಯ ನೀರನ್ನು ನೋಡಿದ ಕೂಡಲೇ ಚಿತ್ರಸೇನನಿಗೆ ಬಾಯಾರಿಕೆಯಿಂದ ತನ್ನ ನಾಲಗೆ ಅಂಟಿಕೊಂಡಿರುವುದು ಗೊತ್ತಾಯಿತು. ಅವನು ಬೇಗ ಬೇಗನೇ ಅಲ್ಲಿಗೆ ಹೋಗಿ ನದಿಯಲ್ಲಿಳಿದು ಬಾಯಾರಿಕೆಯನ್ನು ಪರಿಹರಿಸಿಕೊಂಡನು.




ಬಾಯಾರಿಕೆ ಅಡಗಿದ ಕೂಡಲೇ ಅವನಿಗೆ ಅರ್ಧ ಬಲವು ಕೂಡಿದಂತಾಯಿತು. ಅವನು ನದಿಯ ತೀರದಲ್ಲಿ ಕುಳಿತು ಮುಂದಿನ ಕರ್ತವ್ಯವೇನೆಂದು ಆಲೋಚಿಸತೊಡಗಿದನು. ಬಹುಶಃ ತನ್ನ ಅಣ್ಣನಾದ ಶೂರಸೇನನು ಕೂಡಾ ತನ್ನ ಹಾಗೆಯೇ ಸಿಂಹದ ಬಾಯಿಗೆ ಬೀಳದೆ ತಪ್ಪಿಸಿಕೊಂಡು, ಎಲ್ಲಿಗೋ ಹೋಗಿರಬಹುದು. ಅವನ ಕುದುರೆಯೂ ಹೆದರಿ ಓಡಿದ್ದು ಗೊತ್ತಾಗಿತ್ತು. ಅವನು ಕೂಡಾ ಈ ಕಡೆಗೇ ಬಂದಿರಬಹುದೇನೋ ಎಂದು ಚಿತ್ರಸೇನನು ಅನುಮಾನಿಸಿದನು.

ಅವನು ಎದ್ದುನಿಂತು ಉಚ್ಚಸ್ವರವನ್ನು ತಂದು, "ಅಣ್ಣಾ ! ಶೂರಸೇನಾ !" ಎಂದು ಕೂಗಿ ಕೂಗಿ ಕರೆಯತೊಡಗಿದನು.

ಚಿತ್ರಸೇನನ ಕೂಗು ಮರಗಳಿಗೂ, ಗುಡ್ಡಗಳಿಗೂ ಅಪ್ಪಳಿಸಿ ಮಾರ್ಮೊಳಗಿ ನಿಂತ ಕೂಡಲೇ, ನದಿಯ ಆಚೆಯ ತೀರದಲ್ಲಿದ್ದ ಒಂದು ಗುಹೆಯೊಳಗಿನಿಂದ, "ಏನಿದೂ ? ಯಾರದೂ ? ಈ ಪ್ರಾಂತದಲ್ಲಿ ಮಾನವ ಕಂಠಸ್ವರ ಹೊರಟಿದೆಯಾ ? ಎಂತಹ ಅದೃಷ್ಟವಂತನಪ್ಪಾ ! ಕಂದಾ ! ಯಾರಪ್ಪಾ ಅದೂ ? ಒಂದುಸಾರಿ ನದಿಯನ್ನು ದಾಟಿ ನನ್ನ ಬಳಿಗೆ ಬಾರಪ್ಪಾ !" ಎಂಬ ಕರೆಯುವ ಶಬ್ದ ಚಿತ್ರಸೇನನ ಕಿವಿಗೆ ಬಿತ್ತು.

ಗುಹೆಯೊಳಗಿನಿಂದ ಹೊರಟುಬಂದ ಆ ಶಬ್ದವನ್ನು ಕೇಳಿ ಚಿತ್ರಸೇನನು ಬೆಚ್ಚಿಬಿದ್ದವನಾಗಿ, ಅಷ್ಟರಲ್ಲೇ ಧೈರ್ಯ ತಂದುಕೊಂಡು, ಖಂಗೆಂಬ ಕಂಠಸ್ವರದಿಂದ, "ನೀನು ಯಾರಯ್ಯಾ ? ರಾಕ್ಷಸನೋ ? ನರಮಾಂಸ ಭಕ್ಷಕನಾದ ಕಿರಾತಕನೋ ? ಹಾಗಿದ್ದರೆ ಗುಹೆಯೊಳಗೇ ಏಕೆ ಕೂಗುವಿ ? ಹೊರಗೆ ಬಾ ! ನನ್ನ ಕತ್ತಿಗೆ ಬಳ್ಳಿಯ ಬಲಿಯಾಗುವಿಯೋ ನೋಡುತ್ತೇನೆ. ಧೈರ್ಯದಿಂದ ನೀನಾರೆಂಬುದನ್ನು ತೋರಿಸು" ಎಂದನು.

ಚಿತ್ರಸೇನನ ಮಾತು ಮುಗಿಯುವುದರೊಳಗೆ ಗುಹೆಯೊಳಗಿನಿಂದ ವಿಚಿತ್ರವಾದ ನಗುವಿನ ಶಬ್ದ ಕೇಳಿತು. ಆಮೇಲೆ, "ಎಷ್ಟೊಂದು ಸಾಹಸಿಯೋ ವತ್ಸಾ ! ನಿನ್ನಂತಹ ಧೈರ್ಯಶಾಲಿಗಾಗಿಯೇ ನಾನು ಇದಿರು ನೋಡಿಕೊಂಡಿದ್ದೇನಪ್ಪಾ ! ನಾನು ಮನುಷ್ಯನೇ. ಮನುಷ್ಯರನ್ನು ತಿನ್ನುವ ಕಿರಾತನೇನೂ ಅಲ್ಲ. ರಾಕ್ಷಸನೂ ಅಲ್ಲ. ಒಬ್ಬ ಸಿದ್ಧನಪ್ಪಾ ನಾನು. ನಾನು ಇಷ್ಟು ಕಾಲದಿಂದ ತುಂಬಾ ಶ್ರಮಪಟ್ಟು, ಸಂಪಾದಿಸಿದ ಒಂದು ಅಮೂಲ್ಯ ವಸ್ತುವನ್ನು ನಿನಗೇ ಕೊಟ್ಟುಬಿಡಬೇಕೆಂದಿದ್ದೇನೆ. ಸಂದೇಹಿಸದೆ ಬಾರಪ್ಪಾ. ಎದ್ದು ಹೊರಗೆ ಬರುವ ಸ್ಥಿತಿಯಲ್ಲಿ ನಾನಿಲ್ಲ" ಎಂಬ ಮಾತುಗಳು ಕೇಳಿಸಿದುವು.

ಚಿತ್ರಸೇನನು ಕ್ಷಣಮಾತ್ರದಲ್ಲೇ ಒಂದು ನಿಶ್ಚಯಕ್ಕೆ ಬಂದನು. ಆ ಗುಹೆಯೊಳಗಿರುವವನು ರಾಕ್ಷಸನೇ ಆಗಿದ್ದರೆ ತಾನು ಇಲ್ಲಿಂದ ಜೀವದೊಂದಿಗೆ ಪಾರಾಗಿ ಹೋಗಲು ಸಾಧ್ಯವಾಗದು. ಆದುದರಿಂದ ರಾಕ್ಷಸ



ನೊಂದಿಗೆ ಹೋರಾಡಿ ಪ್ರಾಣಬಿಡುವುದೇ ಕ್ಷತ್ರಿಯ ಧರ್ಮ. ಒಂದುವೇಳೆ ಗುಹೆಯಲ್ಲಿರುವವನು ಸಿದ್ಧನೇ ಆಗಿದ್ದರೆ ತನಗೇನೂ ಕೆಡುಕು ಆಗುವಂತಿಲ್ಲ. ಈಗ ಬೇರೆ ದಾರಿ ಕೂಡಾ ಯಾವುದೂ ಇಲ್ಲ. ಏನಿಲ್ಲ ದಿದ್ದರೂ ಈ ಪ್ರಾಂತದಿಂದ ತಪ್ಪಿಸಿಕೊಳ್ಳುವ ದಾರಿ ಯಾದರೂ ಕೇಳಬಹುದಷ್ಟೆ ?

ಹೀಗೆ ನಿಶ್ಚಯಕ್ಕೆ ಬಂದ ಕೂಡಲೇ ಚಿತ್ರಸೇನನು ಒಂದು ಕೈಯಲ್ಲಿ ಬಿಚ್ಚುಗತ್ತಿಯನ್ನು ಹಿಡಿದುಕೊಂಡು ಮೊಣಕಾಲವರೆಗಷ್ಟೇ ನೀರಿರುವ ನದಿಯಲ್ಲಿ ಇಳಿದು ಆಚೆಯ ತೀರಕ್ಕೆ ಹೋಗಿ ಸೇರಿದನು.

ಅಲ್ಲಿ ಗುಡ್ಡದ ಬದಿಯಲ್ಲಿ ಅನೇಕ ಗುಹೆ ಗಳಿದ್ದುವು. ಆದುದರಿಂದ ಅವನನ್ನು ಕರೆದವನು ಯಾವ ಗುಹೆಯಲ್ಲಿರುವನೆಂದು ಅವನಿಗೆ ತಿಳಿಯ ಲಿಲ್ಲ. ಅವನು ಒಂದೊಂದು ಗುಹೆಯೊಳಗೂ ಬಗ್ಗಿ ಬಗ್ಗಿ ನೋಡುತ್ತಾ ಮೆಲ್ಲ ಮೆಲ್ಲನೆ ಹೋದನು. ಆಗ ಅವನ ಪಕ್ಕದಲ್ಲಿದ್ದ ಒಂದು ಗುಹೆಯೊಳಗಿ ನಿಂದ "ನಾನೇ ಕರೆದವನು. ಕದಲಲಾಗದಂತೆ ಕುಳಿ ತಿದ್ದೇನೆ. ಭಯಪಡದೆ ಒಳಗೆ ಬಾರಪ್ಪಾ" ಎಂಬ ಕರೆ ಕೇಳಿಸಿತು.

ಚಿತ್ರಸೇನನು ಕತ್ತಿಯನ್ನು ಇನ್ನಿಷ್ಟು ಬಿಗಿಯಾಗಿ ಹಿಡಿದುಕೊಂಡು, ಆ ಗುಹೆಯ ಮುಂದೆ ಹೋಗಿ ಒಳಕ್ಕೆ ಬಗ್ಗಿ ನೋಡಿದನು.

ಗುಹೆಯೊಳಗೆ ಒಬ್ಬ ಸಿದ್ಧನಿರುವುದು ಕಂಡಿತು. ಅವನ ತಲೆಗೂದಲೂ, ಗಡ್ಡವೂ ಬೆಳ್ಳಗೆ ಹಣ್ಣಾ ಗಿದ್ದುವು. ಅವನು ಗುಹೆಯ ಮಧ್ಯದಲ್ಲಿದ್ದ ಎತ್ತರ ವಾದ ವೇದಿಕೆಯ ಮೇಲೆ ಕುಳಿತುಕೊಂಡಿದ್ದನು. ಗುಹೆಯ ಮೇಲ್ಭಾಗದಲ್ಲಿರುವ ರಂಧ್ರಗಳಿಂದ ಸೂರ್ಯಕಾಂತಿ ಒಳಗೆ ಪ್ರವೇಶಿಸಿ ಗುಹೆಯೊಳಗಿನ ಭಾಗವು ಬೆಳಕಾಗಿತ್ತು.

ವೃದ್ಧನಾದ ಸಿದ್ಧನನ್ನು ನೋಡಿದ ಕೂಡಲೇ ಚಿತ್ರಸೇನನು, ತಾನು ಈ ಮೊದಲು ಮಾತಾಡಿದ ರೀತಿಯನ್ನು ನೆನೆದು ನೊಂದುಕೊಂಡನು. ಅವನು ಕತ್ತಿಯನ್ನು ಒರೆಯೊಳಗೆ ಸೇರಿಸಿ, ಸಿದ್ಧನ ಮುಂದೆ ಹೋಗಿ ನಮಸ್ಕಾರಮಾಡಿ, "ಮಹಾತ್ಮಾ, ನಿಮ್ಮನ್ನು ನೋಡದೆ ಏನೇನೋ ಹೇಳಿಬಿಟ್ಟೆನು. ದಯಮಾಡಿ ನನ್ನನ್ನು ಕ್ಷಮಿಸಬೇಕೆಂದು ಬೇಡುತ್ತೇನೆ" ಎಂದನು ವಿನಯದಿಂದ.

ಚಿತ್ರಸೇನನ ಮಾತುಕೇಳಿ ಸಿದ್ಧನು ಮುಗುಳು ನಗುತ್ತ, "ಅಪ್ಪಾ, ನೀನು ಒಳ್ಳೆಯ ಕ್ಷತ್ರಿಯ ಯುವಕನಾಗಿ ಕಾಣುವಿ. ಅರುವತ್ತು ವರ್ಷಗಳ ನನ್ನ ತಪಃ ಶಕ್ತಿಯನ್ನೆಲ್ಲಾ ಧಾರೆಯೆರೆದು ಒಂದು ಅಪೂರ್ವ ವಸ್ತುವನ್ನು ಸಾಧಿಸಿಕೊಂಡಿದ್ದೇನೆ. ಆದರೆ ಅದನ್ನು ಅನುಭವಿಸುವ ಯೋಗ್ಯತೆ ನನಗಿಲ್ಲ, ನಾನು ಅದನ್ನು ಸಾಧಿಸುವ ಪ್ರಯತ್ನದಲ್ಲಿಯೇ ಮುದುಕ ನಾಗಿ ಬಿಟ್ಟೆನು. ಈ ದಿನ ಅಷ್ಟಮಿ ತಾನೇ ? ರಾತ್ರಿ ಚಂದ್ರೋದಯದ ವೇಳೆಗೆ ನನಗೆ ಮರಣವು ಬರಲಿದೆ. ನಾನು ಇಷ್ಟೆಲ್ಲ ಶ್ರಮಗಳನ್ನು ಸಹಿಸಿ

ಸಾಧಿಸಿಕೊಂಡುದನ್ನು ಯೋಗ್ಯನಾದ ಯಾವನಿಗಾದರೂ ಕೊಟ್ಟು, ಹೊರಟುಹೋಗಬೇಕೆಂದು ನಿರೀಕ್ಷಿಸಿಕೊಂಡಿದ್ದೇನೆ. ನನ್ನ ಈ ಕೊನೆಯ ದಿನದಲ್ಲಿ ನನ್ನ ಅದೃಷ್ಟವು ನಿನ್ನನ್ನು ಇಲ್ಲಿಗೆ ಎಳೆದುಕೊಂಡು ಬಂತು. ಆದ್ದರಿಂದ ನೀನೇ ಅದಕ್ಕೆ ಪಾತ್ರನು. ಬೇರೆ ಯಾವ ಪ್ರಶ್ನೆಯನ್ನೂ ಕೇಳುವುದಿಲ್ಲ. ಇಕೋ, ಆ ಅಪೂರ್ವ ವಸ್ತು. ತೆಗೆದುಕೋ ಅಪ್ಪಾ!" ಎಂದು ಪಕ್ಕದಲ್ಲಿದ್ದ ಒಂದು ಬಿದಿರು ಬುಟ್ಟಿಯನ್ನು ಚಿತ್ರಸೇನನಿಗೆ ಕೊಟ್ಟನು.



ಚಿತ್ರಸೇನನು ಸಿದ್ಧನಿಂದ ಬುಟ್ಟಿಯನ್ನು ಪಡೆದುಕೊಂಡು ಕುತೂಹಲದಿಂದ ಅದನ್ನು ತೆರೆಯಲು ನೋಡುವಷ್ಟರಲ್ಲಿ ಸಿದ್ಧನು ತನ್ನ ದಂಡದಿಂದ ಬುಟ್ಟಿಯ ಮುಚ್ಚಳವನ್ನು ಒತ್ತಿ, "ಅಪ್ಪಾ, ಅವಸರಪಟ್ಟು ಬುಟ್ಟಿಯ ಮುಚ್ಚಳ ಇಲ್ಲಿಯೇ ತೆರೆಯಬಾರದು. ನೀನು ಯಾವ ಪ್ರಾಂತದಲ್ಲಿ ವಾಸವಾಗಿರಬೇಕೆಂದು ಬಯಸುವಿಯೋ ಆ ಪ್ರಾಂತದಲ್ಲೇ ಇದನ್ನು ತೆರೆದು ನೋಡು. ಆಗಲೇ ಇದರಿಂದ ನಿನಗೆ ಕ್ಷೇಮಗಳುಂಟಾಗುತ್ತವೆ. ಅಷ್ಟರವರೆಗೆ ಸಹನೆಯಿಂದಿರು" ಎಂದನು.

ಚಿತ್ರಸೇನನು ಸಿದ್ಧನ ಮಾತನ್ನು ಅಂಗೀಕರಿಸುವವನಂತೆ ತಲೆಯಾಡಿಸುತ್ತ, "ಮಹಾತ್ಮಾ, ನಿಮ್ಮ ದಯೆಗೆ ಕೃತಜ್ಞನು. ನನ್ನಿಂದ ನಿಮಗೆ ಎಂತಹ ಸೇವೆ ಶುಶ್ರೂಷೆಗಳಾಗಬೇಕೆಂಬುದನ್ನು ಹೇಳಿರಿ. ಮಾಡಲು ಸಿದ್ಧನಾಗಿದ್ದೇನೆ" ಎಂದನು.

ಅದನ್ನು ಕೇಳಿ ಸಿದ್ಧನು ನಗುತ್ತ, "ಅಪ್ಪಾ, ನಿನ್ನ ನಮ್ರತೆಯನ್ನೂ ಭಕ್ತಿಯನ್ನೂ ನೋಡಿ ನನಗೆ ಆನಂದವಾಗುತ್ತಾ ಇದೆ. ಇನ್ನು ಕೆಲವು ಗಂಟೆಗಳಲ್ಲೇ ನಾನು ಸಾಯಲಿದ್ದೇನೆ. ಈ ಸ್ಥಿತಿಯಲ್ಲಿ ನೀನು ನನಗೆ ಮಾಡಬೇಕಾದ ಸಹಾಯವೇನೂ ಇಲ್ಲ. ಆದರೆ ನಿನಗೊಂದು ಸಣ್ಣ ಕೆಲಸ ಮಾತ್ರ ಹೇಳುತ್ತೇನೆ. ಈಗ ನೀನು ಈ ಗುಹೆಯಿಂದ ಹೊರಗೆ ಹೋದ ಮೇಲೆ ಗುಹೆಯ ಮೂಡು ದಿಕ್ಕಿನಲ್ಲಿರುವ ಕೋಣಾಕೃತಿಯ ಕಲ್ಲನ್ನು ಕೆಳಕ್ಕೆ ಎಳೆದುಬಿಡು. ಅದೇ ನೀನು ನನಗೆ ಮಾಡಬೇಕಾದ ಪ್ರತ್ಯುಪಕಾರ. ಅಷ್ಟು ಮಾಡಿದರೆ ಸಾಕು" ಎಂದನು.

ಚಿತ್ರಸೇನನು ಸಿದ್ಧನಿಗೆ ನಮಸ್ಕಾರಮಾಡಿ ಗುಹೆಯಿಂದ ಹೊರಗೆ ಬಂದು, ಅವನು ಹೇಳಿದ ಕಲ್ಲನ್ನು ಎರಡು ಕೈಗಳಿಂದಲೂ ಹಿಡಿದು ಬಲವಾಗಿ ಎಳೆದನು. ಆಗ ಬೆಟ್ಟವೇ ದದ್ದರಿಸಿ ಹೋಗುವಂತೆ ದೊಡ್ಡದೊಂದು ಶಬ್ದವಾಯಿತು. ಕಣ್ಣುಮುಚ್ಚಿ ಬಿಡಿಸುವುದರೊಳಗೆ ಗುಹೆಯ ಮುಂದಿನ ಭಾಗವನ್ನು ಮೇಲಿನಿಂದ ಜಾರಿಬಿದ್ದ ಅಗಲವಾದ ಮೇಜಿನಂತಹ ಕಲ್ಲು ಹಲಗೆಯೊಂದು ಗುಹೆಯ ಗುರುತು ತಿಳಿಯದ ಹಾಗೆ ಮುಚ್ಚಿಕೊಂಡಿತು.

ಚಿತ್ರಸೇನನು ಅಲ್ಲಿ ಸ್ವಲ್ಪ ಹೊತ್ತು ನಿಂತುಕೊಂಡು, ತರುವಾಯ ಹೊರಟು ನದಿಯನ್ನು ದಾಟಿ ಅರಣ್ಯದೊಳಗೆ ಪ್ರವೇಶಿಸಿದನು. ತಾನು ನಗರಕ್ಕೆ ಸೇರ

ಬೇಕಾದರೆ ಯಾವ ದಿಕ್ಕಿಗೆ ಹೋಗಬೇಕೆಂದು ಅವನಿಗೆ ತಿಳಿಯದು. ತಾನು ಕೇಳಲೂ ಇಲ್ಲ. ಸಿದ್ಧನು ಹೇಳಲೂ ಇಲ್ಲ. ತಾನು ಯಾರೆಂಬುದನ್ನು ಕೂಡ ತಿಳಿಯದೆ ನಂಬಿದ ಸಿದ್ಧನ ಹತ್ತಿರ ತಾನು ದಾರಿತಪ್ಪಿ ಬಂದೆನೆಂದು ಹೇಳಲು ಸಂದರ್ಭ ಸರಿಯಾಗಿರಲಿಲ್ಲ. ಕೆಲವು ಗಂಟೆಯಲ್ಲೇ ಸಾಯಲಿರುವವನೊಂದಿಗೆ ತನ್ನ ಕಷ್ಟ ಹೇಗೆ ಹೇಳಿಕೊಳ್ಳಲೆಂಬ ದಾಕ್ಷಿಣ್ಯ ಬಂದಿತ್ತು.

ಹೀಗಾಗಿ ಚಿತ್ರಸೇನನು ಮರಗಳೆಡೆಯಲ್ಲಿ ಸುಲಭ ದಾರಿ ನೋಡಿಕೊಂಡು ನಡೆಯತೊಡಗಿದನು. ಹೀಗೆ ಸ್ವಲ್ಪ ಹೊತ್ತು ನಡೆಯಲು ಸೂರ್ಯನು ಪಶ್ಚಿಮ ದಿಕ್ಕಿಗೆ ಮಾಲುವುದು ಕಂಡಿತು. ಕ್ರಮವಾಗಿ ಅವನಿಗೆ ವಿಪರೀತ ಹಸಿವೆಯಾಗತೊಡಗಿತು.

ಆಯಾಸಪಡುತ್ತ ಚಿತ್ರಸೇನನು ಕುಡಿನೊಳಗೆ ನಡೆಯುತ್ತ ಮರಗಳು ಕಡಿಮೆಯಾಗಿರುವ ಒಂದು ಎತ್ತರವಾದ ಪ್ರದೇಶವನ್ನು ಸೇರಿದನು. ಅಲ್ಲಿ ಸ್ವಲ್ಪ ಹೊತ್ತು ಕುಳಿತು ಆಯಾಸ ಪರಿಹರಿಸಿಕೊಂಡ ಮೇಲೆ, ಫಕ್ಕನೆ ಅವನಿಗೆ ತನ್ನ ಭುಜದಲ್ಲಿ ನೇತಾಡಿಕೊಂಡಿರುವ ಬುಟ್ಟಿಯ ನೆನಪು ಬಂದಿತು. ಅದರಲ್ಲಿರುವ ಅಪೂರ್ವ ವಸ್ತು ಎಂತಹುದೆಂದು ನೋಡಬೇಕೆಂಬ ಕುತೂಹಲವು ಒತ್ತ ತೊಡಗಿತು. ಆ ಕ್ಷಣದಲ್ಲಿ ಸಿದ್ಧನು ಹೇಳಿದ ಎಚ್ಚರಿಕೆಯ ಮಾತು ಅಷ್ಟೇನೂ ಮುಖ್ಯವೆಂದು ಕಾಣಲಿಲ್ಲ.

ಅವನು ಬುಟ್ಟಿಯನ್ನು ಭುಜದಿಂದ ತೆಗೆದು ಕೆಳಗಿಟ್ಟು, ಅದರ ಮುಚ್ಚಳವನ್ನು ಮೇಲೆತ್ತಿ ಆತುರದಿಂದ ನೋಡಿದನು. ಕೂಡಲೇ ಅವನ ಕಣ್ಣಿನೊಳಗೆ ಮಿಂಚು ಹೊಳೆದಂತಾಯಿತು. ಚಿತ್ರಸೇನನು ಕಣ್ಣುಗಳನ್ನು ಮುಚ್ಚಿ ಮತ್ತೆ ತೆರೆಯುವಷ್ಟರಲ್ಲಿ ಇದಿರಿನಲ್ಲಿದ್ದ ಮರಗಳ ನಡುವೆ ಆಕಾಶವನ್ನು ಅಂಟಿಕೊಂಡಂತಿರುವ ದೊಡ್ಡದೊಂದು ಭವನವಿರುವುದು ಕಂಡಿತು.

ತನ್ನ ಇದಿರಿನಲ್ಲಿ ಊಹಿಸಲಾಗದ ಅದ್ಭುತ ದೃಶ್ಯವನ್ನು ನೋಡಿದ ಚಿತ್ರಸೇನನು ಶಿಲಾಪ್ರತಿಮೆಯಂತೆ ಸ್ತಬ್ಧನಾದನು. ಮರುಕ್ಷಣದಲ್ಲಿ ಅವನಿಗೆ ಸಿದ್ಧನು ಹೇಳಿದ ಎಚ್ಚರಿಕೆ ನೆನಪಾಯಿತು.



"ಅಯ್ಯೋ! ನಾನೆಂತಹ ಮೂರ್ಖನಾಗಿಬಿಟ್ಟೆ? ಈ ಮಹಾರಣ್ಯದ ನಡುವಿನಲ್ಲಿ ಈ ದಿವ್ಯ ಭವನದಿಂದ ನನಗೇನು ಪ್ರಯೋಜನ? ಇಂತಹ ಮಹಾ ಭವನವು ನಮ್ಮ ಧವಳಗಿರಿಯಲ್ಲಿದ್ದು ಬಿಟ್ಟರೆ ಎಷ್ಟೊಂದು ಚೆನ್ನಾಗಿರುತ್ತಿತ್ತು! ನನ್ನ ಬುದ್ಧಿಹೀನತೆಯಿಂದಾಗಿ ಸಿದ್ಧನು ಮಾಡಿದ ಮೇಲನ್ನೆಲ್ಲಾ ಅರಣ್ಯದ ಪಾಲು ಮಾಡಿದೆನಲ್ಲ!" ಎಂದುಕೊಂಡು ದುಃಖಿಸತೊಡಗಿದನು.

ಆ ಸ್ಥಿತಿಯಲ್ಲಿರುವ ಚಿತ್ರಸೇನನಿಗೆ ಮತ್ತೊಂದು ಆಶ್ಚರ್ಯವು ಬರತೊಡಗಿತು. ಅರಣ್ಯದ ನಡುವಿನಿಂದ ಎಂತಹುದೊ ಕರ್ಣಕರ್ಕಶವಾದ ಬೊಬ್ಬೆಗಳು ಕೇಳ ಬಂದುವು. ನೋಡುತ್ತಿದ್ದ ಹಾಗೆ ಮರಗಳೆಲ್ಲ ಮಹಾ ಗಾಳಿಗೆ ಓಲಾಡ ತೊಡಗಿದುವು. ಇದೇನೆಂದು ತಿಳಿಯದೆ ಚಿತ್ರಸೇನನು ಭಯಾಂದೋಲನೆಯಿಂದಲೂ ಆಶ್ಚರ್ಯದಿಂದಲೂ ನೋಡುತ್ತಿದ್ದ ಹಾಗೆ, ಅಡ್ಡ ಬರುವ ದೊಡ್ಡ ದೊಡ್ಡ ಮರಗಳನ್ನು ಕೈಗಳಿಂದ ದೂಡಿ ಬೀಳಿಸುತ್ತ, ಒಬ್ಬ ರಾಕ್ಷಸನು ಅವನ ಕಡೆಗೆ ಬರುತ್ತಿದ್ದನು. ಅವನನ್ನು ನೋಡಿ ಚಿತ್ರಸೇನನ ಸರ್ವಾಂಗವೂ ಜುಮ್ಮೆನ್ನಲು, ತಟ್ಟನೆದ್ದು ಕತ್ತಿಯನ್ನು ಹಿರಿದು ನಿಂತನು.

ರಾಕ್ಷಸನು ವಿಕಟಾಟ್ಟಹಾಸ ಮಾಡುತ್ತ ಅವನ ಬಳಿಗೆ ಬಂದು, "ಏನೋ! ನರಪೋರಾ! ಏನು ನಿನ್ನ ಧೈರ್ಯ! ಸಾಹಸ! ಈ ಉಗ್ರಾಕ್ಷನನ್ನು ನೋಡಿದ ಕೂಡಲೇ ನರಮನುಷ್ಯನಾದವನು ಪ್ರಾಣ ಬಿಡುತ್ತಾನೆ. ನಿನ್ನ ಹಾಗೆ ಕತ್ತಿ ಹಿಡಿದು ನಿಲ್ಲುವ ಮನುಷ್ಯ ಈವರೆಗೂ ಇದ್ದದ್ದಿಲ್ಲ" ಎಂದು ಗರ್ಜನಾ ಧ್ವನಿಯಿಂದ ಹೇಳಿ, ಅತ್ತತಿರುಗಿ ಆ ಮಹಾ ಭವನದ ಕಡೆಗೆ ನೋಡುತ್ತ, "ಈ ಮನೆಯು ಬೊಂಬೆ ಕಟ್ಟಿದವನು ನೀನೇ ಏನು?" ಎಂದು ಪ್ರಶ್ನೆ ಮಾಡಿದನು.

"ಹೌದು" ಎಂದು ಚಿತ್ರಸೇನನು ಜೋರಿನಿಂದಲೇ ಹೇಳಿದನು.

ಆ ಪ್ರತ್ಯುತ್ತರವನ್ನು ಕೇಳಿದ ಕೂಡಲೇ ರಾಕ್ಷಸನು "ಆಹಹ್ಹಾ!" ಎಂದ ಮರಗಳ ಎಲೆಗಳೆಲ್ಲ ಉದುರಿ



ಹೋಗುವ ಹಾಗೆ ನಗುತ್ತ, "ಈ ಅರಣ್ಯವನ್ನು ನಿನ್ನ ಮುತ್ತಾತ ನೀರೆರೆದು ಬೆಳೆಸಿದರೆಂದು ಅಂದು ಕೊಂಡಿರುವಿಯೇನು ? ಜಾಗ್ರತೆ ! ಇದು ಉಗ್ರಾಕ್ಷನ ಅರಣ್ಯ. ನನ್ನ ಅಪ್ಪಣೆಯಿಲ್ಲದೆ ಈ ಮನೆಯನ್ನು ಕಟ್ಟಿದ್ದಕ್ಕೆ ನಿನ್ನನ್ನೂ, ಈ ಮನೆಯನ್ನೂ ಒಂದಾಗಿ ಕಟ್ಟಿ, ಆ ಬೆಟ್ಟದಾಚೆಗೆ ಬೀಸಿ ಒಗೆಯುತ್ತೇನೆ, ನೋಡು !" ಎಂದವನೇ ಬಗ್ಗಿ ಚಿತ್ರಸೇನನನ್ನು ಹಿಡಿಯಲು ಬಂದನು.

ಚಿತ್ರಸೇನನು ರಾಕ್ಷಸನಿಗೆ ದೊರಕದೆ ಹಾರಿ ತಪ್ಪಿಸಿಕೊಂಡು, "ಉಗ್ರಾಕ್ಷಾ ! ಅವಸರಪಟ್ಟು ಬಿಡ ಬೇಡ ! ಎಚ್ಚರಿಕೆ ! ನಾನು ಇಲ್ಲಿ ಮನೆ ಕಟ್ಟಿ ಕೊಂಡದ್ದರಿಂದ ನಿನಗೆ ಬಂದ ನಷ್ಟವೇನು ? ಬೇಕಾದರೆ ಆ ಮನೆಯನ್ನು ನಿನಗೇ ಕೊಟ್ಟು ನನ್ನ ದಾರಿ ಹಿಡಿದು ಹೋಗಿಬಿಡುತ್ತೇನೆ. ರಾಕ್ಷಸರಿಗಾದರೂ ಒಂದು ನ್ಯಾಯ ನೀತಿ ಇದೆಯಷ್ಟೆ ? ನಿನ್ನನ್ನು ಕೇಳಲಿಕ್ಕೆ ನೀನೆಲ್ಲಿ ನನಗೆ ಸಿಕ್ಕಿದ್ದಿ ?" ಎಂದನು.

"ಆ ಮಾತೆಲ್ಲಾ ಪ್ರಯೋಜನವಿಲ್ಲ. ಈ ಅರಣ್ಯದಲ್ಲಿ ನನ್ನನ್ನು ಧಿಕ್ಕರಿಸಿ ಇಂಥಾ ಮನೆಯನ್ನು ಕಟ್ಟಿರುವಿ. ನಿನಗೆ ಜೀವದೊಂದಿಗೆ ಇಲ್ಲಿಂದ ಹೊರಬೀಳ ಬೇಕೆಂದಿದ್ದರೆ ನಾನು ಕೇಳುವುದಕ್ಕೆ ಒಪ್ಪಬೇಕು" ಎಂದನು ಉಗ್ರಾಕ್ಷ.

"ಏನದು ?" ಎಂದು ಕೇಳಿದನು ಚಿತ್ರಸೇನ.

"ನೀನು ಈ ಮನೆಯಲ್ಲೇ ಸುಖವಾಗಿ ಬದುಕಿರು. ನನ್ನ ಅಭ್ಯಂತರವೇನಿಲ್ಲ. ನಿನಗೆ ಹುಟ್ಟುವ ಮಕ್ಕಳಲ್ಲಿ ದೊಡ್ಡವನನ್ನು ಹದಿನೆಂಟನೆಯ ವಯಸ್ಸು ಬಂದ ಕೂಡಲೇ ನನಗೆ ಕೊಟ್ಟುಬಿಡು. ಏನನ್ನುವಿ ?" ಎಂದನು ಉಗ್ರಾಕ್ಷ ರಾಕ್ಷಸ.

ರಾಕ್ಷಸನ ಕೋರಿಕೆ ಚಿತ್ರಸೇನನಿಗೆ ಬಹಳ ವಿಚಿತ್ರವಾಗಿ ತೋರಿತು. ತನಗೆ ಇನ್ನೂ ಮದುವೆಯೇ ಆಗಿಲ್ಲ. ಹಾಗಿರುವಾಗ ರಾಕ್ಷಸನು ಕೇಳಿದುದಕ್ಕೆ ಸರಿಯೆಂದರೆ ನಷ್ಟವೇನಿದೆ ? ತಾನು ಪ್ರಾಣವುಳಿಸಿಕೊಂಡು ಇಲ್ಲಿಂದ ಹೊರಬೀಳಬಹುದಷ್ಟೆ ?

ಹೀಗೆ ಆಲೋಚಿಸಿ ಚಿತ್ರಸೇನನು, "ಉಗ್ರಾಕ್ಷಾ, ನೀನು ಕೇಳುವಂಥಾದ್ದಕ್ಕೆ ಒಪ್ಪಿಕೊಳ್ಳುತ್ತೇನೆ. ನನ್ನ ಹಿರಿಯ ಮಗನಿಗೆ ಹದಿನೆಂಟನೆಯ ವಯಸ್ಸು ಬಂದ ಕೂಡಲೇ ನೀನು ಬಂದು ಅವನನ್ನು ನಿರಭ್ಯಂತರವಾಗಿ ಕರೆದುಕೊಂಡು ಹೋಗಬಹುದು" ಎಂದನು.

ರಾಕ್ಷಸನು ಅವನು ಹೇಳಿದುದನ್ನು ಕೇಳಿ ಸಂತೋಷದಿಂದ ಉಕ್ಕುತ್ತ, "ಹಾಗಾದರೆ ನಿನ್ನನ್ನು ಜೀವದೊಂದಿಗೆ ಹೋಗಲು ಬಿಡುತ್ತೇನೆ. ನೀನು ಮಾತ್ರ ಹೇಳಿದ ಮಾತನ್ನು ಮರೆಯಬೇಡ. ನೆನಪಿಟ್ಟು ಕೊಂಡು ಕೊಟ್ಟ ಮಾತು ಉಳಿಸು" ಎಂದು ಹೇಳಿ ಹೊರಟು ಹೋದನು.

—(ಇನ್ನೂ ಇದೆ)






# ಯಾರದ್ದು ಲೋಪ?

'ಮಕ್ಕಳ ಹಾಗೆಯೇ ಕಥೆ ಕೇಳುವ ಕುತೂಹಲ ಕ್ಕೊಳಗಾದನಲ್ಲ ಈ ರಾಜ!' ಎಂದು ಬೇತಾಳವು ಆಶ್ಚರ್ಯಪಡುವಂತೆ, ಮತ್ತೆ ಬಂದ ರಾಜಾ ತ್ರಿವಿಕ್ರಮನು ಮರವನ್ನೇರಿ, ಬೇತಾಳಾವೇಶಿತ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿ ಕೊಂಡು ಮಾತಾಡದೆ ತನ್ನ ಪಾಡಿಗೆ ನಡೆಯ ತೊಡಗಿದನು. ಆಗ ಶವದ ಬಾಯಿಯಿಂದ ಬೇತಾಳವು ಮಾತಾಡಲು ತೊಡಗಿತು: "ಎಲೈ ರಾಜನೇ, ಈ ಸ್ಮಶಾನದಲ್ಲಿ ಭಯಂಕರವಾದ ಈ ಅರ್ಧ ರಾತ್ರಿಯ ಸಮಯದಲ್ಲಿ ನೀನು ಇಷ್ಟೊಂದು ಕಠಿಣ ಶ್ರಮ ವಹಿಸುವುದೆಂದರೆ, ನಿನ್ನ ಸ್ವಂತ ಬುದ್ಧಿ ಯಿಂದ ಮಾಡುವ ಕೆಲಸದಂತೆ ಕಾಣುವುದಿಲ್ಲ, ಯಾರದೋ ಪ್ರೋತ್ಸಾಹ ನಿನಗಿರುವಂತೆ ಸಂದೇಹ ವಾಗುತ್ತದೆ, ಕೇವಲ ಪರರ ಬುದ್ಧಿಯನ್ನೇ ಆಧಾರ ಮಾಡಿಕೊಂಡಿದ್ದರೆ ಪ್ರಾಣಕ್ಕೇ ಬಂದೀತೆಂಬ ಸಂಗತಿ ನಿನಗೆ ತಿಳಿಯದೇನು? ವಿವೇಕವಂತರಾದವರು ಕೂಡಾ ಗ್ರಹಚಾರ ವಶದಿಂದ ಸ್ವಂತ ಬುದ್ಧಿಯನ್ನು ತುಳಿದುಕೊಂಡು ಅಪಹಾಸ್ಯಕ್ಕೆ ಗುರಿಯಾಗುವು ದುಂಟು. ಇದಕ್ಕೆ ಉದಾಹರಣೆಯಾಗಿ ಒಂದು ಕಥೆ

ಬೇತಾಳ ಕಥೆಗಳು



ಹೇಳುತ್ತೇನೆ, ಕೇಳು. ನಡೆಯುವ ಶ್ರಮ ತಿಳಿಯದಂತೆ ನಿನ್ನ ಆಲೋಚನೆಗೂ ಬೆಳಕುಬೀಳುವಂತಾದೀತು" ಎಂದು ಕಥೆ ಹೇಳಲು ಪ್ರಾರಂಭಿಸಿತು :

ಒಂದು ಕಾಲದಲ್ಲಿ ಸುವರ್ಣ ದೇಶವನ್ನು ಶಶಾಂಕ ನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನ ರಾಣಿ ಯಾದ ಸುನಂದಾ ಅತ್ಯಂತ ಸುಂದರಿಯಾಗಿದ್ದಳು. ರಾಜನಿಗೆ ಅವಳ ಮೇಲೆ ಅಷ್ಟಿಷ್ಟೆನ್ನಲಾಗದಷ್ಟು ಪ್ರೇಮ. ಅವಳ ಬಾಯಿಯಿಂದ ಹೊರಡುವುದ ರೊಳಗೇ ಅವಳು ಕೇಳುವ ಪ್ರತಿ ವಸ್ತು, ಅದು ಎಷ್ಟು ವ್ಯಯ ಪ್ರಯಾಸಗಳಿಂದ ಕೂಡಿದ್ದರೂ ಭಗೀರಥ ಪ್ರಯತ್ನ ಮಾಡಿಯಾದರೂ ತರಿಸಿಕೊಟ್ಟು ತೃಪ್ತಿಪಡಿಸುತ್ತಿದ್ದನು.

ಸುನಂದಳಿಗೆ ಪ್ರತ್ಯೇಕವಾಗಿ ವಸ್ತ್ರಧಾರಣೆ, ಆಭರಣಾಲಂಕಾರಗಳಲ್ಲಿ ವಿಶೇಷ ಆಸಕ್ತಿಯಿದ್ದಿತು. ಆದುದರಿಂದ ಶಶಾಂಕನು ಅವಳ ಅಪೇಕ್ಷೆಗಳನ್ನು ತೀರಿಸಲು ದೇಶ ವಿದೇಶಗಳಿಂದ, ಚಾಡರನ್ನೂ, ಸುವರ್ಣಕಾರರನ್ನೂ ತರಿಸಿ ತನ್ನ ಆಸ್ಥಾನದಲ್ಲಿ ಇರಿಸಿ ಕೊಂಡಿದ್ದನು. ಅವರಲ್ಲಿ ಚಂದನನೆಂಬ ಬಟ್ಟೆ ನೇಯುವ ಜಾಡನೂ, ಶೋಣಕನೆಂಬ ಸುವರ್ಣ ಕಾರನೂ ಅಸಮಾನ ಪ್ರತಿಭಾಶಾಲಿಗಳಾಗಿದ್ದರು. ಅವರ ಹೆಸರು ಸುವರ್ಣ ದೇಶದಲ್ಲಿ ಮಾತ್ರವಲ್ಲದೆ ಸುತ್ತುಮುತ್ತಲಿನ ರಾಜ್ಯಗಳಲ್ಲಿಯೂ ಮಾರ್ಮೊಳಗು ತ್ತಿದ್ದಿತು. ಅವರ ಜಾಣ್ಮೆಯ ಮುಂದೆ ಎಂತೆಂತಹ ಕೆಲಸಗಾರರೂ ಕೈಯೂರುತ್ತಿದ್ದರು.

ರಾಜಾ ಶಶಾಂಕನು ಪ್ರತಿವರ್ಷವೂ ತನ್ನ ರಾಣಿಯ ಜನ್ಮದಿನವನ್ನು ಅತಿ ವೈಭವದ ಉತ್ಸವವಾಗಿ ಜರುಗಿಸುತ್ತಿದ್ದನು. ಆ ಸಂದರ್ಭದಲ್ಲಿ ರಾಣಿಗೆ ಬೇಕಾದ ವಸ್ತ್ರಗಳನ್ನೂ, ಆಭರಣಗಳನ್ನೂ ಚಂದನನೂ, ಶೋಣಕನೂ ಪ್ರತ್ಯೇಕವಾಗಿ ತಯಾರುಮಾಡಿ ಕೊಡುತ್ತಿದ್ದರು. ಅವರಿಬ್ಬರೂ ಒಂದುಸಾರಿ ಮಾಡಿದ ನಮೂನೆಯನ್ನು ಮತ್ತೊಂದುಸಾರಿ ಉಪಯೋಗಿಸು ತ್ತಿರಲಿಲ್ಲ. ಅಂತಹ ಹೊಸ ಹೊಸ ನಮೂನೆ ಗಳನ್ನು ತರುವ ಜಾಣತನವು ಸಾಧಾರಣವಾಗಿ ಮಾನವ ಮಾತ್ರರಿಗೆ ಬರುವಂತಹುದಲ್ಲವೆಂದು ನೋಡಿದವರೆಲ್ಲರೂ ಹೇಳಿಕೊಳ್ಳುವರು.

ಶಶಾಂಕ ರಾಜನಿಗೆ ಸಾರಂಗನೆಂಬ ಆಪ್ತಮಿತ್ರ ನೊಬ್ಬನಿದ್ದನು. ರಾಜನು ತಾನು ತೆಗೆದುಕೊಳ್ಳುವ ಮುಖ್ಯವಾದ ನಿರ್ಣಯಗಳನ್ನು, ಅಂದರೆ ಪರಿ ಪಾಲನೆಗೆ ಸಂಬಂಧಿಸಿದ್ದಾದರೂ ಅಥವಾ ವ್ಯಕ್ತಿಗತ ವಾದುದೇ ಆದರೂ ಮೊದಲು ಸಾರಂಗನೊಂದಿಗೆ ಹೇಳುತ್ತಿದ್ದನು.

ಆದರೆ ಸಾರಂಗನು ಒಂದು ದಿನ ಕೂಡಾ ಬಾಯಿ ಬಿಟ್ಟು ಏನೂ ಹೇಳಿದವನಲ್ಲ. ಹೇಳುವುದನ್ನು ಕೇಳುತ್ತಾ ತಲೆಯಾಡಿಸಿ ಸುಮ್ಮನಿರುವನು. ರಾಜನಿಗೆ ತೃಪ್ತಿಯಾಗುತ್ತಿತ್ತು. ಇದು ಮಕರಂದ ನೆಂಬ ಮಂತ್ರಿಗೆ ಆಶ್ಚರ್ಯವನ್ನೂ, ಕುತೂಹಲ ವನ್ನೂ ಏರ್ಪಡಿಸಿತ್ತು.

ಒಂದು ದಿನ ಮಂತ್ರಿ ಮಕರಂದನು ಶಶಾಂಕನೊಂದಿಗೆ, " ಮಹಾರಾಜರೇ, ಮಂತ್ರಿಯಾಗಿ ನಾನಿರುವಾಗ ಮುಖ್ಯವಾದ ವಿಷಯಗಳನ್ನು ನೀವು ಸಾರಂಗನೊಂದಿಗೆ ಪ್ರಸ್ತಾಪಿಸುತ್ತಾ ಇರುವಿರಿ. ಅವನು ನಿಮಗೆ ಒಂದು ದಿನ ಕೂಡಾ ಯಾವ ಸಲಹೆಯನ್ನೂ ಕೊಟ್ಟಂತೆ ಕಾಣುವುದಿಲ್ಲ. ಆದರೂ ನೀವು ಅವನೊಂದಿಗೆ ಹೇಳುವುದರಲ್ಲಿರುವ ನಿಮ್ಮ ಉದ್ದೇಶವೇನೆಂಬುದು ನನಗೆ ಗೊತ್ತಾಗುವುದಿಲ್ಲ. ಕುತೂಹಲದಿಂದ ಹೀಗೆ ಕೇಳುತ್ತೇನೆ. ತಪ್ಪಾದರೆ ಕ್ಷಮಿಸಬೇಕು " ಎಂದನು.

ಅದಕ್ಕೆ ಶಶಾಂಕನು, " ಸಾರಂಗನ ಮನಸ್ಸು ಎಂತಹುದೆಂದು ನನಗೆ ಚೆನ್ನಾಗಿ ಗೊತ್ತಿದೆ. ಅವನು ಮಾತಾಡಬೇಕೆನಿಸಿದರೆ ಮಾತ್ರವೇ ಬಾಯಿಬಿಡುವವನು. ಆದುದರಿಂದ ಅವನ ಅಭಿಪ್ರಾಯವನ್ನು ಮಾತಿನ ಮೂಲಕ ಮಾತ್ರ ಕೇಳಬೇಕೆಂಬ ಅಗತ್ಯ ಬರುವುದಿಲ್ಲ. ಅವನ ಕಣ್ಣುಗಳ ಮೂಲಕ ಅರ್ಥವಾಗುವ ಮುಖಭಾವವೇ ಸಾಕಾಗುತ್ತದೆ " ಎಂದನು.

ಮುಂದೆ ಕೆಲವು ದಿನಗಳ ಮೇಲೆ ರಾಣಿಯ ಜನ್ಮದಿನವೂ ಬಂದಿತು. ಚಂದನನೂ, ಶೋಣಕನೂ, ಪ್ರತಿ ಸಾರಿಯಂತೆ ರಾಣಿಗೆ ವಸ್ತ್ರಗಳನ್ನೂ ಆಭರಣಗಳನ್ನೂ ತಯಾರಿಸಿ ಕಳುಹಿಸಿಕೊಟ್ಟರು. ಆದರೆ ರಾಣಿ ಅವು ತನಗೆ ತಕ್ಕದಾಗಿಲ್ಲವೆಂದು ಹೇಳಿ ಎಲ್ಲವನ್ನೂ ಹಿಂದಿರುಗಿಸಿ ಕಳುಹಿಸಿದಳು.

ಅದನ್ನು ತಿಳಿದು ರಾಜನಿಗೆ ಬಹಳ ಆಶ್ಚರ್ಯವಾಯಿತು. ಅವನು ಚಂದನನನ್ನೂ, ಶೋಣಕನನ್ನೂ ಕರೆಯಿಸಿ, ಮಹಾರಾಣಿಗೆ ಹಿಡಿಸುವವರೆಗೂ ಹೊಸ ಹೊಸ ನಮೂನೆಗಳನ್ನು ತಯಾರಿಸಿ ತಂದು ತೋರಿಸಬೇಕೆಂದು ಅವರಿಗೆ ಆಜ್ಞಾಪನೆ ಮಾಡಿದನು. ಅವರು ಕೇಳಿದಷ್ಟು ಹಣ ಕೊಡಲು ಕೋಶಾಧಿಕಾರಿಗೂ ತಿಳಿಸಿದನು.

ಅವರಿಬ್ಬರೂ ಎಷ್ಟು ಪ್ರಯತ್ನ ಮಾಡಿದರೂ ರಾಣಿಗೆ ಹಿಡಿಸುವ ರೀತಿಯಲ್ಲಿ ವಸ್ತ್ರ ತಯಾರಿಸುವುದರಲ್ಲಿಯೂ, ಆಭರಣ ಮಾಡುವುದರಲ್ಲಿಯೂ ವಿಫಲರೇ ಆಗಿ ಹೋದರು.





ಕಡೆಗೆ ರಾಜನು ಕೋಪಗೊಂಡು ಅವರನ್ನು ನೋಡಿ, "ನಿಮಗೆ ವಯಸ್ಸಾದ ಹಾಗೆ ನಿಮ್ಮ ಜಾಣತನವು ಕುಂಠಿತವಾಗುವಂತೆ ಕಾಣುತ್ತದೆ. ಆದುದರಿಂದ ಇನ್ನು ಮೇಲೆ ನಿಮ್ಮಂಥವರು ನನಗೆ ಅಗತ್ಯವಿಲ್ಲ. ನೀವಿಬ್ಬರೂ ನನ್ನ ಆಸ್ಥಾನವನ್ನು ಬಿಟ್ಟು ತತ್‌ಕ್ಷಣದಲ್ಲೇ ಹೊರಟುಹೋಗಿಬಿಡಿ" ಎಂದು ಆಜ್ಞೆ ಮಾಡಿದನು.

ಈ ಸಮಾಚಾರವು ರಾಜ ಪ್ರಾಸಾದದೊಳಗಿನ ಎಲ್ಲರಿಗೂ ತಿಳಿಯಿತು. ಸಾರಂಗನು ಅದನ್ನು ಕೇಳಿದ ಕೂಡಲೇ ರಾಜಾ ಶಶಾಂಕನ ಬಳಿಗೆ ಬಂದು, "ಮಹಾರಾಜಾ, ಚಂದನ ಶೋಣಕರ ವಿಷಯದಲ್ಲಿ ನೀವು ಮಾಡಿದ ಆಜ್ಞೆ ಗೊತ್ತಾಯಿತು. ಅವರ ವಯಸ್ಸನ್ನು ಪ್ರಸ್ತಾಪಿಸಿ ಮಾತಾಡಿದ್ದು ಅಷ್ಟೊಂದು ಸಮಂಜಸವಾಗಿ ಕಾಣುವುದಿಲ್ಲ. ಇಷ್ಟು ವರ್ಷಗಳವರೆಗೆ ಅವರ ನೈಪುಣ್ಯತೆಯನ್ನು ನೋಡುತ್ತಾ ಇದ್ದೀರಿ. ಈಗ ಅದನ್ನು ಕುರಿತು ಸಂದೇಹ ತಾಳುವುದರಲ್ಲಿ ಅರ್ಥವೇನೂ ಕಾಣುವುದಿಲ್ಲ. ಅವರು ತಯಾರಿಸಿಕೊಟ್ಟ ವಸ್ತ್ರಗಳನ್ನೂ ಆಭರಣಗಳನ್ನೂ ಸರಿಯಿಲ್ಲವೆಂದು ಮಹಾರಾಣಿಯವರು ತಿರಸ್ಕರಿಸುವುದರಲ್ಲಿಯೂ ಅರ್ಥವಿಲ್ಲ. ದೋಷವು ಬೇರೆಲ್ಲೋ ಇರಬೇಕೆಂದು ನನಗೆ ಕಾಣುತ್ತದೆ. ಅದನ್ನು ನಾವು ತಿಳಿದುಕೊಳ್ಳಬೇಕಾಗಿದೆ. ಅವರಿಬ್ಬರೂ ಆಸ್ಥಾನವನ್ನು ಬಿಟ್ಟು ಹೋಗಬೇಕೆನ್ನುವುದೂ, ದೇಶ ಬಹಿಷ್ಕಾರ ಹಾಕುವುದೂ ಒಂದೇ. ಒಟ್ಟಿನ ಮೇಲೆ ಇದು ಸರಿಯೆಂದು ನನಗೆ ಕಾಣುವುದಿಲ್ಲ, ಮಹಾರಾಜಾ" ಎಂದನು.

ರಾಜನು ಸಾರಂಗನು ಹೇಳುವುದನ್ನು ಮೌನವಾಗಿಯೇ ಕೇಳಿ, ಅಂತಃಪುರಕ್ಕೆ ಹೋಗಿ ರಾಣಿಯೊಂದಿಗೆ ಸಾರಂಗನು ಹೇಳಿದುದನ್ನೆಲ್ಲಾ ಹೇಳಿದನು.

ಅದನ್ನು ಕೇಳಿ ರಾಣಿ ಸುನಂದ ಸ್ವಲ್ಪಹೊತ್ತು ಆಲೋಚನೆ ಮಾಡಿ, ಆಮೇಲೆ ಗಂಡನೊಂದಿಗೆ, "ನಿಮ್ಮ ಆಪ್ತ ಮಿತ್ರನಾದ ಸಾರಂಗನು ನನ್ನ ಕಣ್ಣು ತೆರೆಸಿದ್ದಾನೆ. ಆ ಚಂದನನನ್ನೂ ಶೋಣಕನನ್ನೂ ಆಸ್ಥಾನ ಬಹಿಷ್ಕರಣದಿಂದ ಮುಕ್ತಗೊಳಿಸಿ, ಗೌರವದಿಂದ ಸಭೆಗೆ ಕರೆಯಿಸಿ ದೊಡ್ಡ ರೀತಿಯಲ್ಲಿ ಸತ್ಕಾರ ಮಾಡಿಸಿರಿ. ಇದು ನನ್ನ ಅಪೇಕ್ಷೆ" ಎಂದಳು.

ರಾಣಿ ಹೇಳಿದುದನ್ನು ಕೇಳಿ ಶಶಾಂಕ ರಾಜನು ಬೆರಗಾದನು. ಅವಳ ಅಪೇಕ್ಷೆಯನ್ನು ತಳ್ಳಿಹಾಕಲಾಗದೆ, ಆ ಸಂಗತಿಯನ್ನು ಮಂತ್ರಿಯೊಂದಿಗೆ ಹೇಳಿ, ಚಂದನ ಶೋಣಕರನ್ನು ತಕ್ಕ ರೀತಿಯಲ್ಲಿ ಸನ್ಮಾನಿಸಲು, ಅಗತ್ಯವಾದ ಏರ್ಪಾಟುಮಾಡಲು ಅಪ್ಪಣೆ ಕೊಟ್ಟನು.

ರಾಜನ ಆಜ್ಞೆಯನ್ನು ಕೇಳಿ ಮಂತ್ರಿಗೂ ಬಹಳ ಆಶ್ಚರ್ಯವಾಯಿತು. ಶಿಕ್ಷಿಸುವ ಆಜ್ಞೆಯ ಬದಲು ಸತ್ಕರಿಸಬೇಕೆಂಬ ನಿರ್ಣಯವಾದ ವಿಷಯವೂ ಮಂತ್ರಿಗಳಲ್ಲಿಯೂ, ಆಸ್ಥಾನದ ಸಭಿಕರಲ್ಲಿಯೂ ರಾಜನ ಮೇಲೆ ಒಂದು ಬಗೆಯ ಅಪಹಾಸ್ಯಕ್ಕೆ ಗುರಿ

ಯಾಯಿತು. ಆದರೆ ಯಾರೂ ಬಾಯಿಬಿಡುವಂತಿಲ್ಲ. ಅದೇನೇ ಆದರೂ ಒಂದು ವಾರದೊಳಗೆ ಚಂದನ ಶೋಣಕರಿಗೆ ರಾಜ ಸನ್ಮಾನವೂ, ಅದರೊಂದಿಗೆ ಬೆಲೆಬಾಳುವ ಬಹುಮಾನಗಳೂ ಲಭಿಸಿದುವು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಗಂಡನ ಮೂಲಕ ಸಾರಂಗನು ಹೇಳಿದ ಮಾತುಗಳನ್ನು ಕೇಳಿದ ರಾಣಿ, ತನ್ನ ಬುದ್ಧಿಯನ್ನು ಬದಲಾಯಿಸಿಕೊಳ್ಳಲು ಕಾರಣವೇನೆಂದು ಹೇಳು ನೋಡುವಾ. ಸಾರಂಗನು ತನ್ನ ಗಂಡನ ಆಪ್ತಮಿತ್ರನಾದುದರಿಂದ ಅವನಿಗೆ ಕೋಪ ಬರಿಸುವುದು ಒಳ್ಳೆಯದಲ್ಲವೆಂದು ರಾಣಿ ತಿಳಿದಳೇನು? ಇದಕ್ಕೆ ಸರಿಯಾದ ಉತ್ತರ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆ ಸಿಡಿದು ಹೋಗುತ್ತದೆ. ನೆನಪಿರಲಿ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರಾಣಿಯಲ್ಲಿ ಬಂದ ಬದಲಾವಣೆಗೆ ನೀನು ಹೇಳಿದುದು ಕಾರಣವಲ್ಲ. ಸಾರಂಗನು ಚಂದನ, ಶೋಣಕರನ್ನು ಒಳ್ಳೆಯ ನಿಪುಣರೆಂದು ಮಾತ್ರ ಹೇಳಿದ್ದಲ್ಲ. ಲೋಪವು ಅವರ ಕೆಲಸಗಾರಿಕೆಯಲ್ಲಿ ಇಲ್ಲವೆಂದೂ, ಬೇರೆಲ್ಲಿಯೋ ಇದೆಯೆಂದೂ ಹೇಳಿದ್ದಾನೆ. ಹಾಗೆ ಅವನು ಸೂಚನೆಯಾಗಿ ಹೇಳಲಿರುವುದು ಏನೆಂಬುದನ್ನು ರಾಣಿ ಅರ್ಥಮಾಡಿಕೊಂಡಳು. ಅದೇನೆಂದರೆ, ಯಾರಿಗಾದರೂ ವಯಸ್ಸಿನೊಂದಿಗೆ ಅನುಭವ ಕೂಡಾ ಹೆಚ್ಚುತ್ತದೆ. ಅನುಭವ ಹೆಚ್ಚಿದಂತೆ ಕಲಾವಿದರ ಜಾಣತನವೂ ಹೊಸ ಹೊಸ ಮೆರುಗು ಪಡೆಯುತ್ತದೆ. ಆದರೆ ಕ್ಷೀಣಿಸುವ ತತ್ವವಿರುವ ಮಾನವ ಶರೀರದಲ್ಲಿ ಮಾತ್ರ ವಯಸ್ಸು ಹೆಚ್ಚಿದಂತೆ ಕಲಾವಿದರ ಸೌಂದರ್ಯವನ್ನು ಅನುಭವಿಸುವ ಭಾವನೆ ಮಂದವಾಗುತ್ತದೆ. ಹಾಗಿರುವಾಗ ಚಂದನ ಶೋಣಕರು ತಯಾರಿಸಿದ ವಸ್ತ್ರಗಳೂ, ಅಲಂಕಾರಗಳೂ ರಾಣಿ ತನಗೆ ತಕ್ಕಂತಿಲ್ಲವೆಂದುಕೊಳ್ಳುವುದಕ್ಕಿಂತ ತನ್ನ ರೂಪಾಕಾರಗಳು ಅವುಗಳಿಗೆ ತಕ್ಕಂತಿವೆಯೆ? ಎಂದು ಆತ್ಮಶೋಧನೆ ಮಾಡಿಕೊಳ್ಳಬೇಕಿತ್ತು. ಸಾರಂಗನು ಹೇಳಿದ ಮಾತುಗಳನ್ನು ಕೇಳಿದ ಮೇಲೆ ರಾಣಿಗೆ ಆ ಸತ್ಯವು ಗೊತ್ತಾಯಿತು. ಲೋಪವು ಅವರು ತಯಾರಿಸಿದ ವಸ್ತುಗಳಲ್ಲಿಲ್ಲವೆಂದೂ, ವಯಸ್ಸು ಬೆಳೆದು ತನ್ನ ಯೌವನ ಕಾಂತಿ ತಗ್ಗಿದುದರಿಂದ ತನಗೆ ಹಾಗೆ ತೋರಿತೆಂದೂ, ಇಷ್ಟೊಂದು ಜ್ಞಾನ ತನಗೆ ಬರುವಂತೆ ಮಾಡಿದ ಆ ಕಲಾಕಾರರನ್ನು ಸನ್ಮಾನಿಸಬೇಕೆಂದೂ ಅವಳು ಹೇಳಿದಳು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವ ಸಮೇತ ಅವನ ಹೆಗಲಿನಿಂದ ಮಾಯವಾಗಿ ಹೋಗಿ ಮರದ ಕೊಂಬೆ ಹಿಡಿದು ನೇತಾಡಿಕೊಂಡಿತು.





# ಅರ್ಹತಾ ಪರೀಕ್ಷೆ

**ಹಿಂದೆ** ಲಕ್ಷಣವೆಂಬೊಂದು ದೇಶವಿತ್ತು. ಶುಭ್ರಕೇತುವೆಂಬ ರಾಜನು ಅದನ್ನು ಪಾಲಿಸಿಕೊಂಡಿದ್ದನು. ಅವನಿಗೆ ಅನೇಕ ಪಂಡಿತರಿದ್ದರೂ, ರಾಜಗುರು ಲಕ್ಷ್ಮೀನಾಥ ಪಂಡಿತನು ಸಮಯೋಚಿತವಾದ ಸಲಹೆ ಮಾಡುವುದರಿಂದ ಪರಿಪಾಲನೆ ಸುಗಮವಾಗಿ ಸಾಗಿಕೊಂಡಿದ್ದಿತು. ಲಕ್ಷ್ಮೀನಾಥ ಪಂಡಿತನ ಮೇಲೆ ರಾಜನಿಗೆ ಬಹಳ ವಿಶ್ವಾಸವಿತ್ತು. ಆದರೆ ರಾಜನ ಪ್ರಜಾಹಿತ ಚಿಂತನೆ ಮಾತ್ರ ಅಷ್ಟಕ್ಕೇ ನಿಂತುಬಿಡಲಿಲ್ಲ. ಆ ವಿಷಯದಲ್ಲಿ ಏನೋ ಒಂದು ಕೊರತೆ ರಾಜನ ಮನಸ್ಸಿನೊಳಗೆ ಅಲುಗಾಡಿಕೊಂಡಿದ್ದಿತು.

ಒಂದುಸಾರಿ ಶುಭ್ರಕೇತು ರಾಜನು ಹೊಸತಾಗಿ ಒಂದು ಪದವಿಯನ್ನು ಕಲ್ಪಿಸಿ, ಆ ಪದವಿಗೆ ಸರಿಯಾದ ಒಬ್ಬ ಉದ್ಯೋಗಸ್ಥನನ್ನು ನಿಯಮಿಸಬೇಕೆಂದು ಆಲೋಚಿಸಿಕೊಂಡನು.

ಆ ಪದವಿಯ ಬಾಧ್ಯತೆ ವಹಿಸುವವನು ರಾಜನಿಗೆ ಮುಖ್ಯ ಸಲಹಾದಾರನಾಗಿಯೂ ಇರಬೇಕಾಗುತ್ತದೆ. ಆದುದರಿಂದ ಅವನು ಒಳ್ಳೆಯ ಮೇಧಾವಿಯಾಗಿದ್ದು ಪ್ರಭುತ್ವದ ಮುಖ್ಯ ಶಾಖೆಗಳ ಕಾರ್ಯಗಳ ಕ್ರಮಣಿಕೆಗಳನ್ನು ಪರ್ಯವೇಕ್ಷಣೆ ಮಾಡುತ್ತಲೂ ಇರಬೇಕಾಗುತ್ತದೆ. ಲಕ್ಷ್ಮೀನಾಥ ಪಂಡಿತನಿಗೂ ಅವನು ಸಹಾಯಕನಂತಿರಬೇಕು. ಅಷ್ಟೆಲ್ಲ ಜವಾಬ್ದಾರಿಯನ್ನು ಆ ಪದವಿಯಲ್ಲಿರುವವನು ನಿರ್ವಹಿಸಬೇಕು.

ಅಂತಹವನಾರೆಂಬುದನ್ನು ಆರಿಸಲು ಅತ್ಯಂತ ಸಮರ್ಥರಾದವರೇ ಆಗಬೇಕು. ಅಭ್ಯರ್ಥಿಗಳಾಗಿ ಬರುವವರೊಂದಿಗೆ ಅನೇಕ ಶಾಖೆಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಕೇಳಬೇಕಾಗುತ್ತದೆ. ಆಯಾ ಶಾಖೆಗಳಲ್ಲಿ ನುರಿತವರಾದ ಅನುಭವಜ್ಞರನ್ನು ಅದಕ್ಕಾಗಿ ಲಕ್ಷ್ಮೀನಾಥ ಪಂಡಿತನ ಸಹಾಯದಿಂದ ತಕ್ಕವರನ್ನು ಆರಿಸಿ ನಿಯಮಿಸಿದ್ದೂ ಆಯಿತು. ಹೀಗೆ ಶುಭ್ರಕೇತು ನಿಯಮಿಸಿದ ಮೇಧಾವಿಗಳಲ್ಲಿ ಲಕ್ಷ್ಮೀನಾಥ ಪಂಡಿತನೂ ಒಬ್ಬನಾಗಿ ಇದ್ದನು.

ಆಯಾ ಕಾರ್ಯಗಳನ್ನು ಕುರಿತು ಶಾಸ್ತ್ರಜ್ಞಾನಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನೇ ಕೇಳಬೇಕೆಂದು ರಾಜನು ಹೇಳಲು, ಲಕ್ಷ್ಮೀನಾಥ ಪಂಡಿತನು ರಾಜನೊಂದಿಗೆ, "ಶುಭ್ರಕೇತು ಪ್ರಭೂ, ಪ್ರಭುತ್ವದ ಮುಖ್ಯ ಸೂತ್ರ ಚಾಲಕ ವ್ಯಕ್ತಿಗೆ ಬುದ್ಧಿಬಲದೊಂದಿಗೆ ನೈತಿಕವಾದ ಕೆಲವು ಅರ್ಹತೆಗಳೂ ಇರಬೇಕು. ಮನೆಯೊಳಗೂ, ಹೊರಗೂ ಸಹಾ ಹೇಗೆ ಹೇಗೆ ಪ್ರವರ್ತಿಸಬೇಕೆಂಬ

ಲಕ್ಷ್ಮೀ ಗಾಯತ್ರಿ

ವಿವರಗಳೂ ಅವನಿಗೆ ಗೊತ್ತಿರಬೇಕು. ಆದುದರಿಂದ ಅಭ್ಯರ್ಥಿಗಳ ಬುದ್ಧಿ ಶಕ್ತಿಯನ್ನು ಪರೀಕ್ಷಿಸಿ ಆದ ಮೇಲೆ ಅವರನ್ನು ನಾನು ನಾಲ್ಕು ಪ್ರಶ್ನೆಗಳನ್ನು ಕೇಳುತ್ತೇನೆ. ಅವುಗಳಿಗೆ ಸರಿಯಾದ ಉತ್ತರ ಕೊಟ್ಟವ ನನ್ನು ಆ ಪದವಿಗೆ ಸರಿಯಾದ ಅರ್ಹತೆಯುಳ್ಳವ ನೆಂದು ನಂಬಬಹುದೆಂಬುದು ನನ್ನ ಅಭಿಪ್ರಾಯ" ಎಂದು ಹೇಳಿದನು.

ರಾಜಗುರು ಹೇಳಿದುದಕ್ಕೆ ಶುಭ್ರಕೇತು ಮತ್ತು ಇತರ ನಿರ್ಣಾಯಕರಾಗಿದ್ದ ಸದಸ್ಯರೂ ಒಪ್ಪಿ ಕೊಂಡರು.

ಮುಂದೆ ಒಂದು ವಾರದಲ್ಲಿ ಮಹಾರಾಜನ ಮುಖ್ಯ ಸಲಹಾದಾರ ಪದವಿಗೆ ಅಭ್ಯರ್ಥಿಗಳ ಅರಿಕೆ ಪ್ರಾರಂಭವಾಯಿತು.

ಅನೇಕ ರಂಗಗಳಲ್ಲಿ ತಲೆ ಹಣ್ಣಾದ ಮೇಧಾವಿ ಗಳೆಲ್ಲರೂ ಅಭ್ಯರ್ಥಿಗಳನ್ನು ಬಗೆಬಗೆಯ ಪ್ರಶ್ನೆಗಳಿಂದ ಪರೀಕ್ಷಿಸಿದ ಮೇಲೆ ಲಕ್ಷ್ಮೀನಾಥ ಪಂಡಿತನು ಅವರ ಮುಂದೆ ಈ ಕೆಳಗಿನ ನಾಲ್ಕು ಪ್ರಶ್ನೆಗಳನ್ನಿಟ್ಟನು.

ತೆಗೆಯಲಾಗದ ಧನವನ್ನು ತೆಗೆಯುವಂತಹುದು ಯಾವುದು ?

ಹೆಂಡತಿಗೆ ಸಹಾ ತಿಳಿಸಬಾರದ್ದು ಏನದು ?

ಅನರ್ಥಗಳನ್ನು ಮಾಡಿಸುವುದು ಯಾವುದು ?

ಮುಖ್ಯನಾದ ರಾಜೋದ್ಯೋಗಿಗೆ ಇರಬೇಕಾದ ಅರ್ಹತೆಗಳೂ ಪ್ರವರ್ತನೆಯ ಸರಣಿಯೂ ಎಂತಹವು ?

ಎಲ್ಲಾ ಪರೀಕ್ಷೆಗಳಲ್ಲಿ ಗೆದ್ದವರು ಕೂಡಾ ಲಕ್ಷ್ಮೀನಾಥ ಪಂಡಿತನ ಆ ನಾಲ್ಕು ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡಲಾಗದೆ ತಡಬಡಿಸಿದರು. ಮುಖ್ಯವಾಗಿ ತೆಗೆಯಲಾಗದ ಧನವನ್ನು ಮತ್ತೆ ತೆಗೆಯುವುದೆಂದರೆ ಏನೆಂದು ಅಭ್ಯರ್ಥಿಗಳನ್ನು ಪರೀಕ್ಷಿಸುವ ಇತರ ಮೇಧಾವಿಗಳಿಗೂ ಗೊತ್ತಾಗಲಿಲ್ಲ. ಅವರೂ ತಮ್ಮೊಳಗೆ ಮುಖ ಮುಖ ನೋಡಿಕೊಂಡರು.

ಲಕ್ಷ್ಮೀನಾಥ ಪಂಡಿತನ ಪ್ರಶ್ನೆಗಳಿಗೆ ಉತ್ತರ ಹೇಳಲಾಗದೆ ಅನೇಕ ಮಂದಿ ಅಭ್ಯರ್ಥಿಗಳು ಮುಖ ತಿರುಗಿಸಿಕೊಂಡರು. ಅದನ್ನು ನೋಡಿ ಪದವಿಗೆ



ತಕ್ಕ ಅಭ್ಯರ್ಥಿ ಸಿಗಲಾರನೇನೋ ಎಂದು ಶುಭ್ರಕೇತು ರಾಜನು ಆಂದೋಳನೆಗೊಳಗಾದನು.

ಆ ಸಮಯದಲ್ಲಿ ಕಾಶೀ ನಗರದಲ್ಲಿ ಶಾಸ್ತ್ರಾಭ್ಯಾಸ ಮಾಡಿಬಂದ ವಿಶ್ವನಾಥನೆಂಬ ಯುವಕನು ಹಿಂದೆ ಕುಳಿತಿದ್ದವನು ಎದ್ದು ಮುಂದೆ ಬಂದನು. ಅವನ ಪ್ರಾಯವನ್ನು ನೋಡಿ ಕಡಿಮೆ ಲೆಕ್ಕ ಹಾಕಿಕೊಂಡವರನ್ನೆಲ್ಲಾ ಆಶ್ಚರ್ಯಪಡಿಸುತ್ತ ಅವನು ಇತರ ಮೇಧಾವಿಗಳು ಮಾಡಿದ ಎಲ್ಲಾ ಪರೀಕ್ಷೆಗಳಲ್ಲಿಯೂ ಗೆದ್ದನು.

ಕಡೆಗೆ ಲಕ್ಷ್ಮೀನಾಥ ಪಂಡಿತನ ಆ ನಾಲ್ಕು ಪ್ರಶ್ನೆಗಳೂ ಅವನ ಮುಂದೆ ಬಂದುವು.

ಅದಕ್ಕೆ ಅವನು "ತೆಗೆಯಲಾಗದ ಧನವೆಂದರೆ, ಕಳ್ಳರಿಂದ ತೆಗೆಯಲಾಗದ ಧನ, ಜ್ಞಾನಧನ. ಅದನ್ನು ತೆಗೆಯುವಂತಹುದು ಅಂದರೆ ನಾಶಪಡಿಸುವಂತಹುದು ಅಹಂಕಾರ" ಎಂದು ಉತ್ತರ ಕೊಟ್ಟನು.

ಅದನ್ನು ಕೇಳಿ ಲಕ್ಷ್ಮೀನಾಥ ಪಂಡಿತನು ಸಂತೋಷದಿಂದ, "ಚೆನ್ನಾಗಿ ಹೇಳಿದೆ. ಹೆಂಡತಿಗೆ ಕೂಡಾ ತಿಳಿಯಬಾರದುದು ಏನದು ?" ಎಂದು ಕೇಳಿದನು.

ಅದಕ್ಕೆ ವಿಶ್ವನಾಥನು "ರಹಸ್ಯ" ಎಂದನು.

"ಭೇಷ್ ! ನನ್ನ ಮೂರನೇ ಪ್ರಶ್ನೆ. ಅನರ್ಥವನ್ನು ಮಾಡುವಂತಹುದು ಯಾವುದು ?" ಎಂದನು ಲಕ್ಷ್ಮೀನಾಥ ಪಂಡಿತ.

"ಮಿತಿಮೀರಿದ ಯಾವುದೇ ಆದರೂ ಅನರ್ಥವನ್ನು ಮಾಡುತ್ತದೆ" ಎಂದು ವಿಶ್ವನಾಥನು ಉತ್ತರ ಕೊಟ್ಟನು.

"ಸರಿಯಾಗಿ ಹೇಳಿದೆ. ಈಗ ನನ್ನ ಕೊನೆಯ ಪ್ರಶ್ನೆ. ಒಬ್ಬ ಮುಖ್ಯ ರಾಜೋದ್ಯೋಗಿಗೆ ಇರಬೇಕಾದ ಅರ್ಹತೆಗಳೂ, ಪ್ರವರ್ತನೆಯ ಸರಣಿಯೂ ಏನು ?" ಎಂದು ಲಕ್ಷ್ಮೀನಾಥ ಪಂಡಿತನು ಕೇಳಿದನು.

ವಿಶ್ವನಾಥನು ಹೀಗೆ ಉತ್ತರಿಸಿದನು. "ನೀವು ಈ ಮೊದಲು ಕೇಳಿದ ಮೂರು ಪ್ರಶ್ನೆಗಳಿಗೆ ಕೊಟ್ಟ ಉತ್ತರಗಳೇ ಈ ನಾಲ್ಕನೇ ಪ್ರಶ್ನೆಗೂ ಉತ್ತರವಾಗಿವೆ. ಮುಖ್ಯ ಪದವಿಯಲ್ಲಿರುವವನು ಅಹಂಕಾರವನ್ನು ಬಿಟ್ಟು, ಸ್ವಜನರಿಗಾದರೂ ಪ್ರಭುತ್ವದ ರಹಸ್ಯಗಳನ್ನು ಹೇಳದೆ, ಪ್ರತಿ ವಿಷಯದಲ್ಲಿಯೂ ಉಚಿತಾನುಚಿತಗಳನ್ನೂ, ಪರಿಮಿತಿಯನ್ನೂ ತಿಳಿದುಕೊಂಡು ವ್ಯವಹರಿಸಬೇಕು."

ಲಕ್ಷ್ಮೀನಾಥ ಪಂಡಿತನಿಗೂ ಮತ್ತು ಅಲ್ಲಿ ಸೇರಿದ್ದ ಇತರರಿಗೂ ವಿಶ್ವನಾಥನ ಉತ್ತರಗಳು ಸರಿಯೆನಿಸಿ, ಎಲ್ಲರೂ ಬಹಳವಾಗಿ ಮೆಚ್ಚಿಕೊಂಡರು. ಶುಭ್ರಕೇತು ರಾಜನು ತುಂಬಾ ಸಂತೋಷದಿಂದ ಕೂಡಲೇ ವಿಶ್ವನಾಥನನ್ನು ಆ ಮುಖ್ಯ ಪದವಿಗೆ ನಿಯಮಿಸಿದನು.






**ನಮ್ಮ ದೇವಾಲಯಗಳು:**

## ಚಿದಂಬರಂ

ಒಂದಾನೊಂದು ಕಾಲದಲ್ಲಿ ದಾರುಕಾವನದಲ್ಲಿ ಮುನಿಗಳದೊಂದು ಆಶ್ರಮವಿತ್ತು. ಅಲ್ಲಿಯ ಮುನಿಗಳು ತಮ್ಮ ಜ್ಞಾನವನ್ನೂ, ಅದನ್ನು ಅದ್ಭುತ ರೀತಿಯಲ್ಲಿ ಬಹಿರಂಗ ಪಡಿಸುವ ತಮ್ಮ ಶಕ್ತಿಯನ್ನೂ ನೆನೆದುಕೊಂಡು ಗರ್ವಿಸ ತೊಡಗಿದರು. ಎಲ್ಲರಿಂದಲೂ ಪೂಜಿಸಲ್ಪಡುವ ಅರ್ಹತೆ ತಮಗಿದೆಯೆಂದು ನಂಬಲು ತೊಡಗಿದರು.

ಮುನಿಗಳು ಆಶ್ರಯದಲ್ಲಿಲ್ಲದ ಸಮಯದಲ್ಲಿ ಒಬ್ಬ ಯುವಕ ಭಿಕ್ಷು ಹಾಡುತ್ತಾ, ಕಥೆಗಳನ್ನು ಹೇಳುತ್ತಾ, ಆಶ್ರಮದ ಕಡೆಗೆ ಬಂದನು. ಆ ಯುವಕ ಸನ್ಯಾಸಿಯನ್ನು ನೋಡಿದ ಕೂಡಲೇ ಮುನಿಪತ್ನಿಗಳೆಲ್ಲರೂ ಅವನಿಂದ ಆಕರ್ಷಿಸಲ್ಪಟ್ಟವರಂತೆ ಅವನ ಸುತ್ತಲೂ ಬಂದು ಸೇರಿದರು.





ಆಶ್ರಮಕ್ಕೆ ಹಿಂದಿರುಗಿ ಬಂದ ಮುನಿಗಳು ಅಲ್ಲಿಯ ದೃಶ್ಯವನ್ನು ನೋಡಿ ಕೋಪಗೊಂಡರು. ತಮ್ಮ ಪತ್ನಿಯರನ್ನು ಈಚೆಗೆ ಬರುವಂತೆ ಕರೆದರು. ಬೆದರಿಸಿದರು. ಆದರೂ ಸ್ವಲ್ಪಕೂಡ ಪ್ರಯೋಜನವಾಗಲಿಲ್ಲ. ಆ ಯುವಕ ಭಿಕ್ಷುವಾಗಲೀ, ಮುನಿಪತ್ನಿಯರಾಗಲೀ ಮುನಿಗಳ ಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ.




ಮುನಿಗಳು ತಮ್ಮ ಅದ್ಭುತ ಶಕ್ತಿಗಳನ್ನು ಪ್ರಯೋಗಿಸಲು ಸಿದ್ಧರಾದರು. ದೊಡ್ಡದೊಂದು ಹುಲಿಯನ್ನು ಸೃಷ್ಟಿಸಿ ಯುವಕ ಭಿಕ್ಷುವಿನೆಡೆಗೆ ಓಡಿಸಿದರು. ಹೆಬ್ಬುಲಿ ಭೀಕರವಾಗಿ ಗರ್ಜಿಸುತ್ತ ಅವನ ಮೇಲೆ ಧುಮುಕಲು ಹೋಯಿತು.

ಹುಲಿ ಸಮೀಪಿಸಿದ ಕೂಡಲೇ ಯುವಕ ಭಿಕ್ಷು ಮುಗುಳ್ನಗುತ್ತ ಅದನ್ನು ಮುಟ್ಟಿದನು. ಮರು ಕ್ಷಣದಲ್ಲಿ ಹುಲಿ ಮಾಯವಾಯಿತು. ಅದರ ಚರ್ಮವು ಯುವಕ ಭಿಕ್ಷುವಿನ ನಡುವಿನಲ್ಲಿ ವಸ್ತ್ರದಂತೆ ಸುತ್ತಿಕೊಂಡಿತು. ಆ ದೃಶ್ಯವನ್ನು ನೋಡಿ ಮುನಿಗಳು ಚಕಿತರಾದರು.





ಆದರೂ ಮುನಿಗಳು ತಮ್ಮ ಪ್ರಯತ್ನವನ್ನು ನಿಲ್ಲಿಸದೆ ಒಂದು ಕುಳ್ಳ ದೆವ್ವವನ್ನು ಸೃಷ್ಟಿಸಿ ಆ ಯುವಕ ಭಿಕ್ಷುವಿನ ಮೇಲೆ ಪ್ರಯೋಗಿಸಿದರು. ಕುಳ್ಳ ದೆವ್ವವು ಭಯಾನಕವಾಗಿ ಬೊಬ್ಬಿಡುತ್ತ ಯುವಕ ಭಿಕ್ಷುವಿನ ಸಮೀಪಕ ಬಂದು ಅವನ ಕಾಲಡಿಯಲ್ಲಿ ಬಿದ್ದುಬಿಟ್ಟಿತು.

ಅದನ್ನು ನೋಡಿದ ಮೇಲೆ ಮುನಿಗಳಿಗೆ ಸ್ವಲ್ಪ ಜ್ಞಾನ ಬಂದಂತಾಯಿತು. ಆ ಯುವಕ ಭಿಕ್ಷು ಸಾಮಾನ್ಯದವನಲ್ಲವೆಂದೂ, ಯಾವ ದೇವನೋ ಹೀಗೆ ವೇಷಪಲ್ಲಟಿಸಿಕೊಂಡು ಬಂದಿರಬೇಕೆಂದೂ ಊಹಿಸಿದರು. ಅವರೆಲ್ಲಾ ಒಟ್ಟುಗೂಡಿ ಮೆಲ್ಲನೆ ಅವನ ಸಮೀಪಕ್ಕೆ ಹೋಗಿ, ಕೈ ಜೋಡಿಸಿ ವಿನಯದಿಂದ "ಯಾರು ನೀವು?" ಎಂದು ಕೇಳಿದರು.





ಆಗ ಆ ಯುವಕ ಭಿಕ್ಷು ತನ್ನ ನಿಜ ಸ್ವರೂಪ ದಿಂದ ದರ್ಶನವಿತ್ತನು. ಪರಮಶಿವನೇ ತನ್ನ ಭಕ್ತರಾದ ಮುನಿಗಳಿಗೆ ಬಂದ ಅಹಂಕಾರವನ್ನು ಅಡಗಿಸಲು ಹೀಗೆ ನಾಟಕವಾಡಿದ್ದನು. ತಮ್ಮ ಪತ್ನಿಯರು ಕೂಡಾ ತಮ್ಮ ದೊಡ್ಡತನವನ್ನು ಮರೆತುಬಿಟ್ಟುದರಿಂದ ಮುನಿಗಳ ಅಹಂಕಾರವು ಪೂರ್ತಿ ನಶಿಸಿತು. ಮುನಿಗಳೆಲ್ಲಾ ಶಿವನ ಪಾದ ಗಳಿಗೆ ನಮಸ್ಕಾರ ಮಾಡಿದರು.

ಎಲ್ಲಾ ಮುನಿಗಳೂ ಶಿವನನ್ನು ಕೀರ್ತಿಸುತ್ತ, ಶಿವಲೀಲೆಗಳನ್ನು ವರ್ಣಿಸುತ್ತ ಶಿವನ ಮುಂದೆ ಗಾನ ಮಾಡತೊಡಗಿದರು. ಆ ಗಾನಕ್ಕೆ ಪರವಶ ನಾದ ಶಿವನು ನಾಟ್ಯವಾಡತೊಡಗಿದನು. ಆ ನಾಟ್ಯದಿಂದ ಮುನಿಗಳು ಪರಮಾನಂದ ಪಡೆ ಯುತ್ತಿರಲು ಶಿವನು ಅದೃಶ್ಯನಾದನು.





ಶಿವನು ಮಾಡಿದ ಈ ಅದ್ಭುತ ನಾಟ್ಯದ ಸಂಗತಿಯನ್ನು ಕೇಳಿದ ಆದಿಶೇಷನು ಪರಮೇಶ್ವರನನ್ನು ದರ್ಶನಮಾಡಿ, ಆ ನಾಟ್ಯವನ್ನು ನೋಡಬೇಕೆಂಬ ತನ್ನ ಕುತೂಹಲವನ್ನು ತಣಿಸಬೇಕೆಂದು ಪ್ರಾರ್ಥಿಸಿಕೊಂಡನು. ಆದರೆ ಯಾರೇ ಆಗಲಿ ಶಿವನ ನಾಟ್ಯ ನೋಡಿ ಆನಂದಿಸಬೇಕಾದರೆ ಮಾನವಜನ್ಮ ಎತ್ತಬೇಕಿತ್ತು.

ಆದಿಶೇಷನು ಪತಂಜಲಿಯಾಗಿ ಜನ್ಮಿಸಿ ಶಿವನ ನಟರಾಜ ವಿಗ್ರಹವನ್ನು ಕೆತ್ತಿಸಿದನು. ನಟರಾಜ ವಿಗ್ರಹದ ಪಾದದ ಕೆಳಗೆ ಅಹಂಕಾರ ರಾಕ್ಷಸ ನಿದ್ದಾನೆ. ಒಂದು ಕೈಯಲ್ಲಿ ಡಮರುಕವು, ಜೀವನ ಸಂಗೀತಕ್ಕೆ ಸಂಕೇತವಾಗಿದ್ದಿತು. ಮತ್ತೊಂದು ಕೈಯಲ್ಲಿ ಅಗ್ನಿ, ಅದು ಶಕ್ತಿ ಸ್ವರೂಪ, ಮೂರನೆಯ ಕೈ ಭಕ್ತರ ಪಾಲಿನ ಅಭಯ ಹಸ್ತವಾಗಿ ಮೇಲೆತ್ತಲ್ಪಟ್ಟಿರುತ್ತದೆ. ಶರಣೆಂದವರನ್ನು ಕಾಪಾಡಲು ಸಿದ್ಧವಾಗಿ ನಾಲ್ಕನೆಯ ಹಸ್ತವಿದೆ.





ಶಿವನು ನಾಟ್ಯವಾಡಿದ ಸ್ಥಳವು ಚಿದಂಬರವೆಂಬ ಶಿವಕ್ಷೇತ್ರವಾಗಿ ಅತಿ ಪ್ರಾಚೀನ ಕಾಲದಿಂದಲೇ ಪ್ರಸಿದ್ಧವಾಗಿದೆ. ಮೂವತ್ತೆರಡು ಎಕರೆಯ ವಿಸ್ತೀರ್ಣದಲ್ಲಿ, ಪ್ರಸ್ತುತ ಅಲ್ಲಿ ನೆಲೆಸಿರುವ ಬ್ರಹ್ಮಾಂಡವಾದ ದೇವಾಲಯವು ಎರಡು ಸಾವಿರ ವರುಷಗಳ ಚರಿತ್ರೆಯನ್ನು ಒಳಗೊಂಡಿದೆ. ಈ ಆಲಯದೊಳಗಿನ ಅದ್ಭುತ ಶಿಲ್ಪಗಳು ನೋಡುವವರನ್ನು ಆಶ್ಚರ್ಯಪಡಿಸುತ್ತವೆ.



# ಪಾರಾದ ಗಜಚೋರ

ಸುಮಾರು ಒಂದು ಸಾವಿರ ವರ್ಷಗಳ ಹಿಂದೆ ಹಾಂಗೀ ಚೌ ನಗರದಲ್ಲಿ ಪ್ರಸಿದ್ಧನಾದೊಬ್ಬ ಗಜ ಚೋರನಿದ್ದನು. ಅವನ ನಿಜವಾದ ಹೆಸರೇನೆಂದು, ಹೇಗಿರುವನೆಂದು ಯಾರಿಗೂ ಗೊತ್ತಿರಲಿಲ್ಲ. ಅವನು ಆಗಾಗ ಅನೇಕ ಮನೆಗಳಿಗೆ ನುಗ್ಗಿ, ಎಷ್ಟೆಷ್ಟು ಕಳ್ಳತನ ಮಾಡಿಕೊಂಡಿದ್ದರೂ ಅವನನ್ನು ಕಣ್ಣಿನಿಂದ ನೋಡಿದವರು ಒಬ್ಬರೂ ಇರಲಿಲ್ಲ. ಆದರೆ ಅವನು ಪ್ರತೀಸಾರಿ ಕಳ್ಳತನ ಮಾಡುವಾಗಲೂ, ಮನೆಯ ಗೋಡೆಯ ಮೇಲೆ "ಇದೋ ಬಂದೆನು" ಎಂದು ಬರೆದಿಟ್ಟು ಹೋಗುತ್ತಿದನು.

ಈ ಕಾರಣದಿಂದ ಜನರು ಅವನನ್ನು "ಇದೋ ಬಂದೆನು" ಕಳ್ಳನೆಂದೇ ಹೇಳುತ್ತಿದ್ದರು.

ಬರಬರುತ್ತ "ಇದೋ ಬಂದೆನು" ಕಳ್ಳನ ಕಾಟ ತಾಳಿಕೊಳ್ಳುವುದು ಅಸಾಧ್ಯವಾಯಿತು. ಈ ಮಾಯದ ಗಜಚೋರನಿಂದ ತಮ್ಮನ್ನು ರಕ್ಷಿಸಬೇಕೆಂದು ಜನರು ರಾಜನೊಂದಿಗೆ ಮೊರೆಯಿಟ್ಟುಕೊಳ್ಳತೊಡಗಿದರು. "ಇದೋ ಬಂದೆನು" ಎಂಬ ಕಳ್ಳನಿಗಾಗಿ ತೀವ್ರವಾದ ಆಜ್ಞೆ ಹೊರಟಿತು. ನಗರಗಳ ನ್ಯಾಯಾಧಿಕಾರಿಗಳು ನಗರದೊಳಗೆಲ್ಲಾ ಚೆನ್ನಾಗಿ ಗಾಳಿಸಿ ಆ ಕಳ್ಳನನ್ನು ಹಿಡಿಯಬೇಕೆಂದು ರಕ್ಷಣ ಶಾಖಾಧಿಕಾರಿಗಳಿಗೆ ಆಜ್ಞೆ ಮಾಡಿದರು. ಆ ಕಳ್ಳನನ್ನು ಹಿಡಿಯಲಿಕ್ಕೆ ಒಂದು ಗಡುವಿನ ದಿನವನ್ನೂ ನಿರ್ಣಯಿಸಲ್ಪಟ್ಟಿತು.

ಹೀಗಾಗಿ ರಕ್ಷಕಭಟರು ದೊಡ್ಡ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದರು. ಅವನು ಯಾವ ಕಳ್ಳನೋ, ಹೇಗಿರುವನೋ, ದಪ್ಪದವನೋ, ಉದ್ದದವನೋ, ಮೂಗು ಹೇಗಿದೆಯೋ ಯಾರಿಗೂ ತಿಳಿಯದು. ಹೇಳುವವರು ಒಬ್ಬರೂ ಇಲ್ಲ. ಅಂಥವನನ್ನು ಇಂತಿಷ್ಟು ದಿನದೊಳಗೆ ಹಿಡಿಯಬೇಕೆಂದರೆ ಹೇಗೆ ಸಾಧ್ಯ? ಆದರೂ ಪಟ್ಟುಹಿಡಿದು ದೀಕ್ಷೆಯಿಂದ ಪ್ರಯತ್ನಿಸಿದರೆ ಸಾಧಿಸಲಾಗದ್ದು ಇರಲಿಕ್ಕಿಲ್ಲವೆಂಬ ನಂಬುಗೆಯಿಂದ ರಕ್ಷಕಭಟರು, ಅಂತೂ ಕಡೆಗೆ ಒಬ್ಬನನ್ನು ಹಿಡಿದುಬಿಟ್ಟರು.

ಆ ಮನುಷ್ಯನನ್ನು ನ್ಯಾಯಾಧಿಕಾರಿಯ ಬಳಿಗೆ ತಂದು, "ಅಯ್ಯಾ, ಇವನೇ ಇದೋ ಬಂದೆನು ಕಳ್ಳ! ಇವನಿಗೆ ತಕ್ಕ ಶಿಕ್ಷೆ ವಿಧಿಸಿ, ನಗರಗಳಿಗೆ ಬಂದ ಪೀಡೆಯನ್ನು ಪರಿಹರಿಸಬೇಕು" ಎಂದು ಮನವಿ ಮಾಡಿಕೊಂಡರು.

ಚೀನಾ ಜಾನಪದ ಕಥೆ



"ಆ ಗಜಚೋರ ಇವನೇ ಎಂಬುದಕ್ಕೆ ಏನು ಆಧಾರವಿದೆ? ತಕ್ಕ ಸಾಕ್ಷಿ ಎಲ್ಲಿದೆ?" ಎಂದು ನ್ಯಾಯಾಧಿಕಾರಿ ಕೇಳಿದನು.

"ನಾವು ಬಹಳ ಶ್ರದ್ಧೆಯಿಂದ ಪರೀಕ್ಷಿಸಿಯೇ ಇವನನ್ನು ಹಿಡಿದಿದ್ದೇವೆ. ಬೇರೆ ಸಾಕ್ಷಿ ಬೇಡವೆಂದೇ ನಮ್ಮ ನಂಬುಗೆ. ನೀವು ನಮ್ಮ ಮಾತುಗಳನ್ನು ನಂಬಬಹುದು" ಎಂದು ರಕ್ಷಕಭಟರೆಲ್ಲರೂ ಒಕ್ಕೊರಲಿನಿಂದ ಹೇಳಿದರು.

ಆಗ ಆ ಮನುಷ್ಯನು ಬಾಯಿತೆರೆದು, "ಮಹಾ ಪ್ರಭೂ! ಇವರು ತಮ್ಮ ಬಾಧ್ಯತೆಯನ್ನು ತಪ್ಪಿಸಿಕೊಳ್ಳಲಿಕ್ಕಾಗಿ ಯಾವನೋ ಒಬ್ಬನನ್ನು ಹಿಡಿದು ತಂದರೆ ತೀರಿತೆಂದುಕೊಂಡಿದ್ದಾರೆ. ನನ್ನ ಕರ್ಮದಿಂದ ನಾನೊಬ್ಬ ಇವರಿಗೆ ಸಿಕ್ಕಿದೆನು" ಎಂದನು.

ನ್ಯಾಯಾಧಿಕಾರಿ ಅನುಮಾನಿಸುವುದನ್ನು ನೋಡಿ ರಕ್ಷಕಭಟರ ನಾಯಕನಾದ ಕೋತ್ವಾಲನು, "ಇವನ ಮಾತನ್ನು ನಂಬಿ ಇವನನ್ನು ಬಿಟ್ಟುಬಿಡಬಾರದು ಪ್ರಭೂ! ನಿಜವಾದ ಆ ಕಳ್ಳ ಇವನೇ. ಇವನನ್ನು ಹಿಡಿದು ತರಬೇಕಾದರೆ ನಮ್ಮ ತಲೆಯ ಪ್ರಾಣ ತಳಕ್ಕೆ ಮುಳುಗಿದ ಹಾಗಾಗಿದೆ, ಈಗ ಇವನನ್ನು ಬಿಟ್ಟರೆ ಸಾಕು, ಮತ್ತೆ ಎಂದೂ ದೊರಕಲಾರನು!" ಎಂದು ಒತ್ತಿ ಹೇಳಿದನು.

ಕೋತ್ವಾಲನು ಅಷ್ಟೊಂದು ಗಟ್ಟಿಯಾಗಿ ಹೇಳುವುದನ್ನು ಕೇಳಿ ನ್ಯಾಯಾಧಿಕಾರಿ, "ಸರಿ. ಪ್ರಸ್ತುತ ಇವನನ್ನು ಬಂದೀಖಾನೆಯಲ್ಲಿ ಸೇರಿಸಿಬಿಡಿರಿ. ಒಂದು ಅಥವಾ ಎರಡು ತಿಂಗಳು ನೋಡೋಣ. ನಿಜವು ಹೊರಬೀಳುತ್ತದೆ" ಎಂದನು.

ಸಿಕ್ಕಿಬಿದ್ದವನು ನಿಜಕ್ಕೂ "ಇದೋ ಬಂದೆನು" ಎನ್ನುವ ಗಜಚೋರನೇ. ಅವನು ಬಂದೀಖಾನೆಯೊಳಗೆ ಹೋದಕೂಡಲೇ, ಜೈಲಿನ ಅಧಿಕಾರಿಯೊಂದಿಗೆ ಬಹಳ ವಿನಯದಿಂದ, "ಅಯ್ಯಾ, ಹೊಸ ಖೈದಿಗಳು ಬರಿಗೈಯಿಂದ ತಮ್ಮ ಬಳಿಗೆ ಬರುವುದು ಆಚಾರವಲ್ಲ. ಆದರೆ ಏನು ಮಾಡಲಿ? ರಕ್ಷಕಭಟರು ನನ್ನನ್ನು ಹಿಡಿದುಕೊಳ್ಳುವಾಗ ನನ್ನ ಹತ್ತಿರ ಇದ್ದುದನ್ನೆಲ್ಲಾ ಕಿತ್ತು ಎಳೆದು ಗಂಟುಕಟ್ಟಿಕೊಂಡರು. ತಾವು ದಯಮಾಡಿ ಗುಡ್ಡೇದೇವರ ಗುಡಿಗೆ ಹೋಗಿ ಅಲ್ಲಿ ಒಡೆದ ಇಟ್ಟಿಗೆ ಕಲ್ಲುಗಳ ಅಡಿಯಲ್ಲಿ ಆ ಕಳ್ಳನಿಗೆ ಹೆದರಿ ನಾನು ಅಡಗಿಸಿಟ್ಟ ಬೆಳ್ಳಿಯನ್ನು ತಂದುಕೊಳ್ಳಿರಿ" ಎಂದನು.

ಜೈಲಿನ ಅಧಿಕಾರಿ ಅವನ ಮಾತುಗಳನ್ನು ನಂಬಲಿಲ್ಲ. ಆದರೂ ಆಶೆ ಬಿಡದೆ ಅವನು ಅಲ್ಲಿಗೆ ಹೋಗಿ ನೋಡಿದಾಗ, ಒಂದು ಸೇರಿನಷ್ಟು ಬೆಳ್ಳಿ ಅವನಿಗೆ ಸಿಕ್ಕಿತು.

ಅಂದಿನಿಂದ ಜೈಲು ಅಧಿಕಾರಿ ಆ ಖೈದಿಯನ್ನು ಚೆನ್ನಾಗಿ ನೋಡಿಕೊಳ್ಳುತ್ತ ಅವನೊಂದಿಗೆ ಸಖ್ಯತೆಯಲ್ಲಿ ಇರತೊಡಗಿದನು.

"ಕೆಲವು ದಿನ ಕಳೆದ ಮೇಲೆ ಖೈದಿ ಜೈಲು ಅಧಿಕಾರಿಯೊಂದಿಗೆ, "ಇಂಥಲ್ಲಿ ಒಂದು ಸಂಕವಿದೆ

ಯಷ್ಟೆ? ಅದರ ಬುಡದಲ್ಲಿ ಕೂಡಾ ಸ್ವಲ್ಪ ಮೊತ್ತವನ್ನು ಅಡಗಿಸಿಟ್ಟಿದ್ದೇನೆ. ಅದನ್ನು ಕೂಡಾ ಬೇಕಾದರೆ ನೀವೇ ತಂದುಕೊಳ್ಳಿರಿ!" ಎಂದನು.

"ಆ ಸಂಕದ ಮೇಲೆ ಯಾವಾಗಲೂ ಜನರು ತಿರುಗಾಡಿಕೊಂಡೇ ಇರುತ್ತಾರಲ್ಲ?" ಎಂದನು ಜೈಲು ಅಧಿಕಾರಿ.

"ನದಿಯಲ್ಲಿ ಬಟ್ಟೆ ಒಗೆಯಲು ಹೋಗುವ ಹಾಗೆ ಬುಟ್ಟಿಯೊಂದಿಗೆ ಹೋಗಿರಿ. ಹಣವನ್ನು ತೆಗೆದು ಬುಟ್ಟಿಯಲ್ಲಿ ಹಾಕಿ, ಅದರ ಮೇಲೆ ಬಟ್ಟೆಗಳನ್ನು ಮುಚ್ಚಿಬಿಟ್ಟರೆ ಒಂದು ನರಹುಳಕ್ಕೂ ಗೊತ್ತಾಗದು" ಎಂದನು ಖೈದಿ.

ಅಧಿಕಾರಿ ಅವನು ಹೇಳಿದ ಹಾಗೆಯೇ ಮಾಡಿ, ಸಂಕದ ಅಡಿಯಿಂದ ಒಂದು ಪೀಸೆಯಾಗುವಷ್ಟು ಬೆಳ್ಳಿ ಹಣ ತಂದುಕೊಂಡನು. ಆಮೇಲೆ ಅವರಿಬ್ಬರ ನಡುವೆ ಪ್ರಾಣ ಸ್ನೇಹವೇ ಉಂಟಾಯಿತು. ಆ ದಿನ ರಾತ್ರಿ ಜೈಲು ಅಧಿಕಾರಿ ಪರಮ ಸಂತೋಷದಿಂದ ಆ ಖೈದಿಯೊಂದಿಗೆ ಕೂಡಿ ಕುಡಿಯಲು ಸಾರಾಯಿ ತೆಗೆದುಕೊಂಡು ಬಂದನು.

"ನೋಡಣ್ಣಾ, ಈ ದಿನ ರಾತ್ರಿಯಲ್ಲಿ ನಾನು ಮನೆಯವರೆಗೆ ಹೋಗಿ ಬರುತ್ತೇನೆ. ಬೆಳಂಜಾಮದ ಹೊತ್ತಿಗೆ ತಿರುಗಿ ಬಂದುಬಿಡುತ್ತೇನೆ. ದೇವರ ಮೇಲೆ ಆಣೆ! ತಪ್ಪಿಸಿಕೊಂಡು ಹೋಗುತ್ತೇನೆಂದು ಸಂದೇಹಪಡಬೇಡಿ. ಹಾಗೆ ಓಡಿಬಿಟ್ಟರೆ ನಾನೇ ತಪ್ಪುಗಾರನೆಂದು ನಾನೇ ಒಪ್ಪಿಕೊಂಡ ಹಾಗೆ ಆಗುತ್ತದಷ್ಟೆ? ಅಲ್ಲದೆ ಓಡಿಗೋಡಿ ಹೋಗುವುದು ಅರ್ಥವಿಲ್ಲದ ಹುಚ್ಚು ಕೆಲಸ. ಈ ದಿನ ತಪ್ಪಿದರೆ ನಾಳೆಯಾದರೂ ನ್ಯಾಯಾಧೀಶರು ಹಿಡಿಸದೆ ಬಿಡಲಾರರು. ನಾನು ತಪ್ಪುಗಾರನಂತೂ ಅಲ್ಲವಷ್ಟೆ?" ಎಂದನು ಖೈದಿ ನಂಬುವ ಹಾಗೆ.

ಖೈದಿಯನ್ನು ಹಾಗೆ ಹೋಗಲು ಬಿಡುವುದು ಸರಿಯಲ್ಲವೆಂದು ತಿಳಿದು ಕೂಡಾ ಸಾಧ್ಯವಿಲ್ಲವೆಂದು



ಖಂಡಿತ ಹೇಳಲು ದಾಕ್ಷಿಣ್ಯಪಟ್ಟು ಅಧಿಕಾರಿ ಸರಿಯೆಂದುಬಿಟ್ಟನು. ಖೈದಿ ಜೈಲಿನಿಂದ ಹೊರಗೆ ಹೋಗಲು ಯಾವ ಬಾಗಿಲನ್ನೂ ಉಪಯೋಗಿಸದೆ, ಮಾಡಿನ ಮೇಲೇರಿ ಹೊರಟುಹೋದನು.

ಮತ್ತೆ ಬೆಳಂಜಾಮದಲ್ಲಿ ಮಾಡಿನ ಮೇಲಿನಿಂದಾಗಿಯೇ ಇಳಿದು ಬಂದು, ಇನ್ನೂ ನಿದ್ದೆಯಲ್ಲಿದ್ದ ಜೈಲು ಅಧಿಕಾರಿಯನ್ನು ಎಬ್ಬಿಸಿ, "ಇದೋ ಬಂದೆನು, ಇದೋ ಬಂದೆನು!" ಎಂದನು.

"ಆಹಾ! ಹೇಳಿದ ಮಾತನ್ನು ಉಳಿಸಿದೆಯಪ್ಪಾ! ತುಂಬಾ ಒಳ್ಳೆಯವನು ನೀನು!" ಎಂದನು ಅಧಿಕಾರಿ ಸಂತೋಷದಿಂದ.

"ಹಾಗೆಲ್ಲಾ ಅನ್ಯಾಯ ಮಾಡುವೆನೇ? ನಿಮ್ಮ ಮರ್ಯಾದೆ ಏನಾದೀತು? ನೀವು ನನಗೆ ಮಾಡಿದ ಈ ಉಪಕಾರ ನಾನೆಂದೂ ಮರೆಯಲಾರೆನು! ನನ್ನ ಕೃತಜ್ಞತೆಯನ್ನು ನಿಮಗೆ ತೋರಿಸಲು ನಿಮ್ಮ ಮನೆಯಲ್ಲಿ ನಿಮಗೊಂದು ಸಣ್ಣ ಕಾಣಿಕೆ ಕೂಡಾ ಹಾಕಿ

ಬಂದಿದ್ದೇನೆ. ಈಗಲೇ ಹೋಗಿ ನೋಡಿಕೊಳ್ಳಿ! ನಾನಿನ್ನು ಬೇಗದಲ್ಲೇ ಹೊರಟುಹೋಗದಿರುವೆನೇ? ನಿರಪರಾಧಿಯನ್ನು ಎಷ್ಟು ದಿನ ಜೈಲಿನಲ್ಲಿರಿಸಿ ಯಾರು?" ಎಂದನು.

ಜೈಲು ಅಧಿಕಾರಿ ಕುತೂಹಲದಿಂದ ತನ್ನ ಮನೆಗೆ ಹೋದನು.

"ಬಂದಿರಾ? ನಿಮಗಾಗಿ ಕರೆಕಳುಹಿಸಬೇಕೆಂದಿರುವಾಗಲೇ ಬಂದಿರಿ. ಬೆಳ್ಳಂಬೆಳಂಜಾಮದಲ್ಲಿ ಎಂಥ ವಿಚಿತ್ರವಾಯಿತೆಂದುಕೊಳ್ಳುವಿರಿ? ಮನೆಯ ಮಾಡಿನ ಮೇಲೆ ಏನೋ ಸಪ್ಪಳ ಕೇಳಿತು. ಅಷ್ಟರಲ್ಲೇ ಈ ಪೊಟ್ಟಣ ಕೆಳಗೆ ಬಿತ್ತು. ತೆಗೆದು ನೋಡಿದರೆ ಬೆಳ್ಳಿ ಹರಿವಾಣ, ಬಂಗಾರದ ಹರಿವಾಣಗಳು!" ಎಂದಳು ಜೈಲು ಅಧಿಕಾರಿಯ ಹೆಂಡತಿ.

ಖೈದಿ ಕೊಟ್ಟ ಕಾಣಿಕೆ ಅದೇ ಎಂದು ಅಧಿಕಾರಿಗೆ ಅರ್ಥವಾಯಿತು. "ಯಾರಿಗೂ ಹೇಳಿಗೀಳಿಬಿಡ ಬೇಡ. ಅವುಗಳನ್ನು ಭದ್ರವಾಗಿ ಅಡಗಿಸಿಟ್ಟುಬಿಡು. ಆಮೇಲೆ ಮೆಲ್ಲ ಮೆಲ್ಲ ಮಾರಿ ಹಣ ಮಾಡಿಕೊಳ್ಳಬಹುದು" ಎಂದನು ಅಧಿಕಾರಿ.

ಆ ದಿನ ನ್ಯಾಯಾಸ್ಥಾನಕ್ಕೆ ಬಂದವರಲ್ಲಿ, ಆರೇಳು ಮಂದಿ ಗೃಹಸ್ಥರು, ಕಳೆದ ರಾತ್ರಿ ತಮ್ಮ ಮನೆಯಲ್ಲಿ "ಇದೋ ಬಂದೆನು" ಎಂಬ ಕಳ್ಳನು ನುಗ್ಗಿ ಬೆಲೆ ಬಾಳುವ ವಸ್ತು ಒಡವೆಗಳನ್ನು ಕದ್ದುಕೊಂಡು ಗೋಡೆಗಳ ಮೇಲೆ ಅದೇ ಒಕ್ಕಣೆಯನ್ನು ಬರೆದು ಹೊರಟುಹೋಗಿದ್ದಾನೆಂದು ಫಿರ್ಯಾದಿ ತಂದಿದ್ದರು. ಆ ಗಜಚೋರನನ್ನು ಕೂಡಲೇ ಹಿಡಿಸಬೇಕೆಂದೂ ನ್ಯಾಯಾಧಿಕಾರಿಯೊಂದಿಗೆ ಬೇಡಿಕೊಂಡರು.

"ನಾನು ಆಗಲೇ ಅಂದುಕೊಂಡೆನು. ರಕ್ಷಕ ಭಟರು ಹಿಡಿದುಕೊಂಡದ್ದು ಯಾವನೋ ಬೇರೊಬ್ಬ ನನ್ನೇ. ನಿಜವಾದ ಕಳ್ಳನು ತಿರುಗಾಡಿಕೊಂಡೇ ಇದ್ದಾನೆ!" ಎಂದುಕೊಂಡನು ನ್ಯಾಯಾಧಿಕಾರಿ. ಒಬ್ಬ ನಿರ್ದೋಷಿಗೆ ಅನ್ಯಾಯ ನಡೆಯಿತೆಂದು ಕೊಂಡು ಆ ಖೈದಿಯನ್ನು ಬಿಡುಗಡೆ ಮಾಡಬೇಕೆಂದು ಜೈಲು ಅಧಿಕಾರಿಗೆ ಆಜ್ಞಾಪತ್ರವನ್ನು ಕಳುಹಿಸಿದನು. ಮತ್ತು ಇಂತಿಷ್ಟು ದಿನಗಳೊಳಗೆ "ಇದೋ ಬಂದೆನು" ಎಂಬ ಗಜಚೋರನನ್ನು ಹಿಡಿಯಲೇಬೇಕೆಂದು ರಕ್ಷಕಭಟರಿಗೆ ಮತ್ತೊಮ್ಮೆ ತೀವ್ರಾಜ್ಞೆಯನ್ನು ಕಳುಹಿಸಿದನು ನ್ಯಾಯಾಧಿಕಾರಿ.

ಗಜಚೋರನು ಜೈಲಿಗೆ ಬಿದ್ದೂ ಸಹ ಪಾರಾಗಿ ಹೋಗಿಬಿಟ್ಟನು. ಹಾಗೆ ಹೋದವನೇ ನಿಜವಾದ ಗಜಚೋರನೆಂದು ಒಬ್ಬ ಜೈಲು ಅಧಿಕಾರಿಗೆ ಮಾತ್ರವೇ ಅರ್ಥವಾಯಿತು.

ಆದರೆ ಅವನು ಕಳ್ಳಸೊತ್ತು ತಿಂದವನಾದುದರಿಂದ, ಬಾಯಿಬಿಟ್ಟರೆ ಬಣ್ಣಗೇಡಾಗುವುದೆಂದು ಸುಮ್ಮನಿದ್ದನು.





# ಶಿವಲೀಲೆ

ತಾಯಿ ಹೇಳಿದ ಮಾತುಗಳನ್ನು ಕೇಳಿ ಸಿದ್ಧರಾಮನಿಗಾದ ಸಂತೋಷಕ್ಕೆ ಪಾರವಿರಲಿಲ್ಲ. ಅವನಿಗೆ ಬಹಳ ಹೆಮ್ಮೆ ಎನಿಸಿತು. "ಹಾಗಾದರೆ ಅವರನ್ನು ದೀಪಾವಳಿಗೆ ಕರೆದುಕೊಂಡು ಬರಬೇಕು ಅಮ್ಮಾ. ಎಲ್ಲರ ಅಕ್ಕ ಬಾವಂದಿರೂ ಹಬ್ಬಕ್ಕೆ ಬರುತ್ತಾರಂತೆ. ಅಮ್ಮಾ, ನಾವು ಈವರೆಗೂ ನಮ್ಮ ಅಕ್ಕನನ್ನೂ ಬಾವನನ್ನೂ ಏಕೆ ಕರೆಯಲಿಲ್ಲ ?" ಎಂದನು.

"ನಮ್ಮಲ್ಲಿ ಅಷ್ಟು ದೂರದವರೆಗೆ ಹೋಗಿ ಅವರನ್ನು ಕರೆದುಕೊಂಡು ಬರಲು ಯಾರಿದ್ದಾರೆ ? ನಿನ್ನ ಅಪ್ಪ ತೀರಿಹೋಗಿ ಬಿಟ್ಟರಷ್ಟೆ ? ನೀನೇನೋ ಚಿಕ್ಕ ಹುಡುಗ. ಕಾಡಿನ ದಾರಿಯಲ್ಲಿ ಹೋಗಬೇಕು. ಕಾಡಿನಲ್ಲಿ ಸಿಂಹಗಳೂ, ಹೆಬ್ಬುಲಿಗಳೂ, ಕರಡಿಗಳೂ, ನಾಗರಹಾವುಗಳೂ ಇವೆ. ಅಲ್ಲದೇ, ಮಗನೇ, ನಾವು ಬಡವರು. ಅಕ್ಕ ಬಾವಂದಿರು ಬಹುದೊಡ್ಡ ಶ್ರೀಮಂತರಾದವರು. ನಮ್ಮ ಬಡ ಮನೆಗೆ ಬಂದು ನಮಗೆ ಕಷ್ಟ ಕೊಡುವವರಲ್ಲಪ್ಪಾ. ಅವರೊಂದಿಗೆ ದೊಡ್ಡ ಪರಿವಾರವೇ ಇದೆ. ಒಂದು ಹೊತ್ತು ತಿಂದರೆ ಇನ್ನೊಂದು ಹೊತ್ತು ತಿನ್ನಲು ಸಾಲದ ನಾವು ಅಷ್ಟೂ ಮಂದಿಗೆ ಹೇಗೆ ಉಪಚಾರ ಮಾಡೇವು? ನೀನು ದೊಡ್ಡವನಾಗಿ ಸಂಪಾದಿಸುವಾಗ ಅಕ್ಕನನ್ನೂ ಬಾವನನ್ನೂ ಕರೆದುಕೊಂಡು ಬರುವಿಯಂತೆ" ಎಂದು ತಾಯಿ ಸಿದ್ಧರಾಮನನ್ನು ಸಮಾಧಾನಪಡಿಸಿದಳು.

ಸಿದ್ಧರಾಮನು ಅದಕ್ಕೇನೂ ಹೇಳದೆ ಒಂದು ಬಗೆಯ ಗಂಭೀರಭಾವ ತಾಳಿದನು. ಮರುದಿನ ಬೆಳಗಾಗುವುದಕ್ಕೆ ಮೊದಲೇ ಎದ್ದು ತಾಯಿಯೊಂದಿಗೆ ಹೇಳದೆ, ಮನೆಯಿಂದ ಹೊರಗೆ ಹೊರಟನು. ದಾರಿಯಲ್ಲಿ ಕಂಡವರೊಂದಿಗೆ ಶ್ರೀಶೈಲಕ್ಕೆ ದಾರಿ ಹೇಗೆಂದು ಕೇಳುತ್ತಾ, ಕ್ರೂರ ಮೃಗಗಳನ್ನೂ, ದಾರಿಯ ಕಷ್ಟವನ್ನೂ, ಆಯಾಸವನ್ನೂ ಲಕ್ಷ್ಯಮಾಡದೆ ಕಡೆಗೆ ಶ್ರೀಶೈಲವನ್ನು ತಲಪಿದನು. ಅಲ್ಲಿ ಎಷ್ಟೋ ತೀರ್ಥಗಳೂ, ದೇವಾಲಯಗಳೂ ಇದ್ದುವು.

ಸಿದ್ಧರಾಮನು ತನ್ನ ಅಕ್ಕ ಬಾವಂದಿರು ಎಲ್ಲಿರುವರೆಂದು ನೋಡುತ್ತಾ ಅಲ್ಲೆಲ್ಲಾ ಸುಮ್ಮನೆ ತಿರುಗಿದನು. ಅವರು ತನ್ನನ್ನು ನೋಡಿದ ಕೂಡಲೇ

## ೨. ಸಿದ್ಧರಾಮನ ಭಕ್ತಿ



ಗುರುತಿಸುವರೆಂದು ಅವನ ಭಾವನೆ. "ಮಲ್ಲಿಕಾರ್ಜುನ ಎಂಬವರು ಎಲ್ಲಿದ್ದಾರೆ ?" ಎಂದು ಕೆಲವವರೊಡನೆ ಕೇಳುತ್ತಿದ್ದನು. ಅವರು ಅವನಿಗೆ ದೇವಾಲಯವನ್ನು ತೋರಿಸುತ್ತಿದ್ದರು. ಸಿದ್ಧರಾಮನು ಅಲ್ಲಿಗೆ ಹೋಗಿ ನೋಡಿದರೆ ಲಿಂಗದ ಹೊರತು ಮತ್ತೇನೂ ಇಲ್ಲ!

ತಿರುಗಿ ತಿರುಗಿ ಸಿದ್ಧರಾಮನು ಬಹಳ ದಣಿದು ಹೋದನು. ಅವನು ದೇವಾಲಯದ ಲಿಂಗದ ಇದಿರಿನಲ್ಲಿ ಕುಳಿತುಕೊಂಡು, "ಬಾವಯ್ಯನನ್ನೂ, ಅಕ್ಕನನ್ನೂ ದೀಪಾವಳಿಗೆ ಕರೆದುಕೊಂಡು ಹೋಗಬೇಕೆಂದು ಯಾರಿಗೂ ಹೇಳದೆ, ಮನೆಯಿಂದ ಹೊರಟು ಬಹಳ ಕಷ್ಟಪಟ್ಟು ಬಂದಿದ್ದೇನೆ. ನಮ್ಮ ಊರಿನಲ್ಲಿ ಎಲ್ಲಾ ಮನೆಗಳ ಅಕ್ಕಂದಿರೂ ಬಾವಂದಿರೂ ದೀಪಾವಳಿಗೆ ಬರುತ್ತಾರೆ. ನನ್ನ ಅಮ್ಮ ಅವರಿಬ್ಬರನ್ನೂ ನೋಡಬೇಕೆಂದು ಯಾವಾಗಲೂ ಹೇಳಿಕೊಂಡಿರುತ್ತಾಳೆ. ಇಷ್ಟು ಕಾಲ ಕರೆಯಲಿಲ್ಲವೆಂದು ಕೋಪವೇನೋ? ನನ್ನನ್ನು ನೋಡಿಯೂ ಮಾತಾಡಿಸದಿರುವರೋ ? ಎಷ್ಟು ಐಶ್ವರ್ಯವಂತರಾದರೂ ಬಂಧುತ್ವ ಹೇಗೆ ಬಿಟ್ಟು ಹೋಗುತ್ತೆ ? ನಾವು ಬಡವರೆಂದು ಅಲಕ್ಷ್ಯಮಾಡದೆ ನಮ್ಮ ಮನೆಗೆ ಬರಲೇ ಬೇಕು. ಲಿಂಗ ಸ್ವರೂಪಾ ! ನೀನೇ ಅವರಿಗೆ ಹೇಳಬೇಕು ದೇವಾ ! ಅವರನ್ನು ಕರೆಯದೆ ನಾನಂತೂ ಒಬ್ಬನೇ ಹಿಂದಿರುಗಿ ಹೋಗುವುದಿಲ್ಲ" ಎಂದನು.

ಸಿದ್ಧರಾಮನ ಪ್ರಲಾಪಗಳು ಅರಣ್ಯರೋದನವೇ ಆಯಿತು. ಅವನು ದೇವಿಯನ್ನು ಕೂಡಾ ಅದೇ ವಿಧವಾಗಿ ಬಾಯಿಬಿಟ್ಟು ಪ್ರಾರ್ಥಿಸಿಕೊಂಡನು. ಯಾವ ಲಾಭವೂ ಕಾಣಲಿಲ್ಲ.

ತಾಳಲಾಗದಷ್ಟು ನಿರಾಶೆಯಿಂದ ಸಿದ್ಧರಾಮನು ಆತ್ಮಹತ್ಯ ಮಾಡಿಕೊಳ್ಳಲು ನಿರ್ಧರಿಸಿಕೊಂಡನು. ಅಕ್ಕನನ್ನೂ ಬಾವನನ್ನೂ ಕರೆದುಕೊಂಡು ಬಂದು ತಾಯಿಯನ್ನು ಮೆಚ್ಚಿಸುವೆನೆಂದು ನಂಬಿದ ಅವನಿಗೆ, ಬಹುದೊಡ್ಡ ನಿರಾಶೆಯಾಯಿತು. ಇನ್ನು ಜತೆ ಹುಡುಗರೊಂದಿಗೆ ಮುಖವೆತ್ತಿ ತಿರುಗಲು ಸಾಧ್ಯವೆ? ಎಲ್ಲರ ಮುಂದೆ ಬಹುದೊಡ್ಡ ಅವಮಾನ! ಅದನ್ನೆಲ್ಲ ಸಹಿಸುವುದಕ್ಕಿಂತ ಸಾಯುವುದೇ ಮೇಲು. ಅಕ್ಕಾ ಬಾವಂದಿರಿರುವ ಸ್ಥಳದಲ್ಲೇ ಸತ್ತರೆ ಆ ಮಾತು ಅವರಿಗೇ ಬರುತ್ತದೆ.

ಹೀಗೆ ಅಂದುಕೊಂಡು ಸಿದ್ಧರಾಮನು ಬೆಟ್ಟದ ಶಿಖರ ಮೇಲೆ ಹತ್ತಿ ಅಲ್ಲಿಂದ ಕೆಳಗಿನ ಅಗಾಧಕ್ಕೆ ಹಾರಲು ನೋಡಿದನು.

ಅಷ್ಟರಲ್ಲಿ ಅವನ ಹೆಗಲುಗಳನ್ನು ಯಾರೋ ಹಿಡಿದರು. ಅವನ ಒಂದು ಬದಿಯಲ್ಲಿ ಗಂಡುಸೂ, ಇನ್ನೊಂದು ಬದಿಯಲ್ಲಿ ಒಬ್ಬಳು ಹೆಂಗುಸೂ ನಿಂತಿದ್ದರು.

"ಯಾರು ನೀವು ? ಸತ್ತುಬಿಡಬೇಕೆಂದು ನಾನು ಹಾರುವಾಗ ನೀವೇಕೆ ನನ್ನನ್ನು ತಡೆಯಬೇಕು ? ನನ್ನ ಅಕ್ಕನಿಗೂ ಬಾವನಿಗೂ ಇಲ್ಲದ ಕರುಣೆ ನಿಮಗೇಕೆ ಬೇಕು ?" ಎಂದನು ಸಿದ್ಧರಾಮ.



ಇಲ್ಲಿ ಹೀಗಿರುವಾಗ ಅಲ್ಲಿ ಸಿದ್ಧರಾಮನ ತಾಯಿ ಹುಡುಗನನ್ನು ಅಲ್ಲೆಲ್ಲಿಯೂ ಕಾಣದೆ ತತ್ತರಿಸಿ ಕೊಂಡಿದ್ದಳು. ಮಗನು ತನ್ನ ಮಾತುಗಳನ್ನೆಲ್ಲ ನಂಬಿ ಶ್ರೀಶೈಲಕ್ಕೇ ಹೋಗಿರುವನೆಂದು ಅವಳಿಗೆ ಸಂಶಯ ವಾಯಿತು. ಅವನು ಜೀವದೊಂದಿಗಿದ್ದಾನೋ ಇಲ್ಲವೋ ಎಂದು ಗೋಳಾಡುತ್ತಿದ್ದಳು.

ಕೆಲವು ದಿನಗಳು ಕಳೆದುವು. ದೀಪಾವಳಿ ಹಬ್ಬದ ದಿನಗಳು ಬಂದುವು. ಆ ದಿನ ಬೆಳಗ್ಗಿನ ಹೊತ್ತಿನಲ್ಲಿ ಸಿದ್ಧರಾಮನು ಓಡೋಡಿ ಮನೆಗೆ ಬಂದು ಅಕ್ಕ ನನ್ನೂ, ಬಾವನನ್ನೂ, ಪರಿವಾರದವರನ್ನೂ ಕರೆದು ಕೊಂಡು ಬಂದೆನೆಂದೂ, ಅವರೆಲ್ಲಾ ಆಲಯದ ಹತ್ತಿರ ಇದ್ದಾರೆಂದೂ ಹೇಳಿದನು. ಸಿದ್ಧರಾಮನ ತಾಯಿ ಆನಂದಾಶ್ಚರ್ಯಗಳಿಂದ ಆಲಯಕ್ಕೆ ಹೋಗಿ ಪಾರ್ವತೀ ಪರಮೇಶ್ವರರನ್ನೂ, ವಿನಾಯಕ, ಕುಮಾರಸ್ವಾಮಿಯನ್ನೂ, ಇತರ ಶಿವ ಪರಿವಾರ ವನ್ನೂ ಕಣ್ಣಾರೆ ದರ್ಶನಮಾಡಿ ಅವರನ್ನೆಲ್ಲಾ ತನ್ನ ಮನೆಗೆ ಕರೆದಳು.

ಅವರೆಲ್ಲಾ ಬರುವಾಗ ಅವಳ ಹಳೆಯ ಮನೆಯ ಸ್ಥಳದಲ್ಲಿ ದಿವ್ಯ ಭವನವಿದ್ದಿತು. ಅತಿಥಿಗಳೆಲ್ಲಾ ಅದ ರೊಳಗೆ ಪ್ರವೇಶಿಸಿದರು. ಆ ದಿನ ಊರವರೆಲ್ಲ ಹೊಸತಾಗಿ ಬೆಳಗುವ ಆ ಮನೆಯನ್ನು ನೋಡಿ ಆಶ್ಚರ್ಯಪಟ್ಟರು. ಮನೆಯ ಬಾಗಿಲುಗಳು ಮುಚ್ಚಿದ್ದುವು. ಒಳಗೆ ಅಪಾರ ಗದ್ದಲ! ಸಂಭ್ರಮ!

ದೀಪಾವಳಿಗೆ ಸಿದ್ಧರಾಮನ ಅತಿಥಿಗಳಾಗಿ ಬಂದ ಪಾರ್ವತೀ ಪರಮೇಶ್ವರರು ಸಿದ್ಧರಾಮನನ್ನೂ, ಅವನ ತಾಯಿಯನ್ನೂ ತಮ್ಮೊಂದಿಗೆ ಕೈಲಾಸಕ್ಕೆ ಕರೆದುಕೊಂಡು ಹೋದರು.

ಒಂದುಸಾರಿ ಗಯಾಸುರನೆಂಬ ರಾಕ್ಷಸನು ಮೂರು ಲೋಕಗಳನ್ನೂ ಆಕ್ರಮಿಸಿ ಕೈಲಾಸದ ಮೇಲೆ ಕೂಡಾ ಮುಗಿಬಿದ್ದನು. ಶಿವನು ತನ್ನ ಜಟಾಜೂಟ ವನ್ನು ಬಿಚ್ಚಿಹಾಕಲು, ಅದರಿಂದ ಭಯಂಕರವಾದ

ಆಗ ಆ ಹೆಂಗುಸು ವಾತ್ಸಲ್ಯದಿಂದ "ನಾವು ಪರಿಕೀಯರೆಂದುಕೊಂಡೆಯೇನೋ ತಮ್ಮಾ? ನಾನೇ ನಿನ್ನಕ್ಕ ಭ್ರಮರಾಂಬಿಕಣೋ! ಇವರೇ ನಿನ್ನ ಬಾವಯ್ಯ. ನಿನಗೇ ನಮ್ಮ ಗುರುತಿಲ್ಲ ಪಾಪ. ನಾವು ನಿನ್ನನ್ನು ನೋಡಿಕೊಂಡೇ ಇದ್ದೇವಪ್ಪಾ? ಮನೆಯಲ್ಲಿ ಅಮ್ಮನೊಂದಿಗೆ ಹೇಳದೆ ಬಂದ ನೀನು ಎಷ್ಟು ಗಟ್ಟಿಗನೋ ನೋಡುವಾ ಅಂತ ಕಾದಿದ್ದೆವು. ನಮ್ಮ ಸೋಮಯರಾಜಿಗಳ ಮಗ ನಮ್ಮಲ್ಲಿಗೆ ಬಂದಿದ್ದಾ ನೆಂದರೆ, ನಿನ್ನನ್ನು ಕಂಡುಹಿಡಿಯದೇ ಇರುತ್ತೇ ವೆಯೇ?" ಎಂದಳು.

ಸಿದ್ಧರಾಮನು ಪರಮಾನಂದದಿಂದ ತುಂಬಿದವ ನಾಗಿ ಅಕ್ಕನಿಗೂ ಬಾವನಗೂ ಕಾಲಿಗೆ ಬಿದ್ದು ನಮಸ್ಕಾರ ಮಾಡಿದನು. ಅವರು ಅವನಿಗೆ ತಮ್ಮ ಮಗಂದಿರನ್ನೂ ಪರಿವಾರವನ್ನೂ ತೋರಿಸಿದರು. ಸಿದ್ಧರಾಮನು ಅವರನ್ನೆಲ್ಲ ತನ್ನೊಂದಿಗೆ ಬರ ಬೇಕೆಂದು ಕೇಳಿಕೊಂಡನು.



ಮುಖದಿಂದ, ಗುಡ್ಡದಂತಹ ಶರೀರದಿಂದ ಒಬ್ಬ ಘೋರಾಕಾರದವನು ಹುಟ್ಟಿ ಹಾರಿ ರಾಕ್ಷಸನನ್ನು ಕಬಳಿಸಲು ಬಂದನು. ಗರ್ಯಾಸುರನು ಭಯದಿಂದ ಗಡಗಡ ನಡುಗುತ್ತ, ಶಿವನನ್ನೇ ಶರಣು ಬೇಡಿದನು. ಆಗ ಶಿವನು ಶಾಂತನಾಗಿ ಅವನಿಗೆ ಅಭಯವಿತ್ತನು.

ಭಯಂಕರ ಮುಖದವನು ಏನು ಮಾಡಬೇಕೆಂದು ತೋರದೆ, "ಹಸಿವೆ! ಹಸಿವೆ! ತಿನ್ನಲು ಬೇಕು!" ಎಂದು ಕೂಗತೊಡಗಿದನು.

"ನಿನ್ನ ಶರೀರವನ್ನೇ ತಿಂದು ಹಸಿವೆ ತಣಿಸಿಕೋ!" ಎಂದನು ಶಿವ ಅವನಿಗೆ.

ಶಿವಾಜ್ಞೆಯನ್ನು ಶಿರಸಾವಹಿಸಿ ಭಯಂಕರ ಮುಖನು ತನ್ನ ಶರೀರವನ್ನೆಲ್ಲಾ ತಾನೇ ತಿಂದು ಬರೀಮುಖ ಮಾತ್ರದಿಂದ ಉಳಿದನು. ಶಿವನು ಪ್ರೀತನಾಗಿ ಆ ಮುಖಕ್ಕೆ "ಕೀರ್ತಿಮುಖ" ನೆಂದು ಹೆಸರಿಟ್ಟು, "ಎಲೋ ಕೀರ್ತಿಮುಖಾ, ನೀನು ಎಲ್ಲಾ ದೇವತೆಗಳ ತಲೆಯ ಮೇಲೆಯೂ ಇದ್ದು, ಅವರಿಗೆ ಸತ್ಕೀರ್ತಿಯನ್ನುಂಟುಮಾಡಿಕೊಂಡಿರು!" ಎಂದು ವರಕೊಟ್ಟನು.

ಹೀಗೆ ಶಿವನ ಅಂಶದಿಂದ ಕೀರ್ತಿಮುಖನಾದವನು, ಮಕರತೋರಣಗಳ ನಡುವೆ, ಪ್ರತಿ ದೇವತಾ ಮೂರ್ತಿಯ ನಡುನೆತ್ತಿಯ ಮೇಲೆ ನೆಲೆನಿಂತು ಅಲಂಕಾರ ಪ್ರಾಯದವನಾದನು.

ಬದರಿಕಾಶ್ರಮದಲ್ಲಿ ದುರ್ವಾಸ ಮುನಿ ತಪಸ್ಸು ಮಾಡಿಕೊಂಡಿದ್ದನು. ಒಂದು ದಿನ ಮಧ್ಯಾಹ್ನದ ಹೊತ್ತಿನಲ್ಲಿ ಅವನು ದೇವತಾರ್ಚನೆಮಾಡಿ, ಅಗ್ನಿ ಕಾರ್ಯ ಮುಗಿಸಿ ಹವಿಶ್ಶೇಷವನ್ನು ಜಿಂಕೆ ಮರಿಗಳಿಗೆ ತಿನ್ನಿಸಿಕೊಂಡಿರುವಾಗ, ತುಂಬುರುವೆಂಬ ಪ್ರಮಥನು ಆಕಾಶ ಮಾರ್ಗದಲ್ಲಿ ತನ್ನ ಹೆಂಡತಿಯೊಂದಿಗೆ ಹೋಗುತ್ತಿದ್ದನು. ಅವನು ದುರ್ವಾಸಾಶ್ರಮದ ಮುಂದಿರುವ ಜಿಂಕೆ ಮರಿಗಳನ್ನು ನೋಡಿ ಚಿಟಿಕೆ ಬಾರಿಸಿದನು. ಅದನ್ನು ಕೇಳಿ ಜಿಂಕೆ ಮರಿಗಳು ಹೆದರಿ ಅತ್ತಿತ್ತ ಓಡಿದುವು. ಇದರಿಂದ ಮೂಗಿನ ಕುಡಿಯಲ್ಲೇ ಕೋಪವಿರುವ ದುರ್ವಾಸನು ತುಂಬುರುವನ್ನು ನೋಡಿ ಮನುಷ್ಯ ಜನ್ಮ ಎತ್ತುವಂತೆ ಶಾಪ ಕೊಟ್ಟನು.

ಅದನ್ನು ಕೇಳಿ ತುಂಬುರು ಹೆದರಿ ವಿಮಾನದಿಂದ ಇಳಿದು ಬಂದು, "ಸ್ವಾಮೀ, ನಿಮ್ಮ ಜಿಂಕೆ ಮರಿಗಳನ್ನು ನೋಡಿ ಪ್ರೀತಿಯಿಂದ ಚಿಟಿಕೆ ಬಾರಿಸಿದರೆ ಅದು ನನ್ನನ್ನು ನಿಮ್ಮ ಶಾಪಕ್ಕೆ ಒಳಪಡಿಸಿತು. ನಿಮ್ಮ ಶಾಪಕ್ಕೆ ಇದಿರಿಲ್ಲವಾದುದರಿಂದ ಹಾಗೆಯೇ ಮನುಷ್ಯ ಜನ್ಮ ಎತ್ತುತ್ತೇನೆ. ಆದರೆ ಆ ಜನ್ಮದಲ್ಲಿ ನನಗೆ ಶಿವಭಕ್ತಿ ಇರುವ ಹಾಗೆ ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು. ಹಾಗೆಯೇ ಆಗಲೆಂದು ಅನುಗ್ರಹ ಮಾಡಿದನು ದುರ್ವಾಸ.

ಹಾಗೆ ದುರ್ವಾಸನ ಶಾಪವನ್ನು ಅನುಭವಿಸಲು ತುಂಬುರು ಕಾಂಚೀ ಪಟ್ಟಣದಲ್ಲಿ ವೈಶ್ಯ ಕುಟುಂಬದ ಒಂದು ಮನೆಯಲ್ಲಿ ಹುಟ್ಟಿದನು. ಅವನಿಗೆ ಚಿರು

ತೊಂಡನೆಂದು ಹೆಸರಿಟ್ಟರು. ಅವನ ಹೆಂಡತಿ ಕೂಡಾ ತಿರುವೆಂಗನಾಚಿ ಎಂಬ ಹೆಸರಿನಲ್ಲಿ ಹುಟ್ಟಿ, ಚಿರು ತೊಂಡನಿಗೆ ಹೆಂಡತಿಯಾಗಿ ಬಂದಳು. ಅವರಿಗೆ ಸಿರಿಯಾಳನೆಂಬೊಬ್ಬ ಮಗನು ಹುಟ್ಟಿದನು.

ಚಿರುತೊಂಡನು ವೀರ ಶೈವಾಚಾರದಲ್ಲಿ ನಿಷ್ಠಾ ಪರಾಯಣನಾಗಿದ್ದನು. ಅವನು ಏಕಾಮ್ರನಾಥನನ್ನು ಅರ್ಚಿಸುತ್ತ ಶಿವಭಕ್ತರನ್ನು ಸೇವಿಸುತ್ತಿದ್ದನು. ಶಿವ ಭಕ್ತರು ಯಾವ ಸಮಯದಲ್ಲಿ ಬಂದು ಯಾವುದು ಬೇಕೆಂದು ಕೇಳಿದರೂ ಶಕ್ತಿವಂಚನೆಯಿಲ್ಲದೆ ಕೊಡುವ ವನು ಚಿರುತೊಂಡ.

ಒಂದು ದಿನ ಅವನ ಮನೆಗೆ ಒಬ್ಬ ಶಿವಭಕ್ತನು ಬಂದು ಚಿರುತೊಂಡನನ್ನು ಆಶೀರ್ವಾದ ಮಾಡಿ, ಪೂಜಿಸಲ್ಪಟ್ಟು, "ಅಪ್ಪಾ, ನಿತ್ಯವೂ ಶಿವನನ್ನು ಕಬ್ಬಿನ ರಸದಿಂದ ಅಭಿಷೇಕ ಮಾಡಿ ಅರ್ಚಿಸುವುದು ನನ್ನ ವ್ರತ. ಆದುದರಿಂದ ನನಗೆ ಒಂದು ಬಿಂದಿಗೆ ತುಂಬ ಕೈಯಿಂದಲೇ ಗಾಣ ಹಾಕಲ್ಪಟ್ಟ ಕಬ್ಬಿನ ರಸವು ಬೇಕಾಗಿದೆ" ಎಂದನು.

ಚಿರುತೊಂಡನು ಬಹಳ ಸಂತೋಷಪಟ್ಟು ಕಬ್ಬಿನ ಜಲ್ಲೆಗಳನ್ನು ಕೊಂಡು ಕೊಂಡು ಬರಲು ಹಣ ದೊಂದಿಗೆ ಹೊರಟು ಹೋದನು.

ಒಂದು ಬಿಂದಿಗೆಯಷ್ಟು ರಸಬೇಕಾದರೆ ನೂರು ಕಬ್ಬಿನ ಜಲ್ಲೆಗಳು ಬೇಕು. ಅಂತಲೇ ಚಿರುತೊಂಡನು ನೂರು ಕಬ್ಬಿನ ಜಲ್ಲೆಗಳನ್ನು ಕೊಂಡು ಕೊಂಡು ಕಟ್ಟಿಸಿದನು. ಆದರೆ ಅಷ್ಟು ದೊಡ್ಡ ಭಾರವನ್ನು ಎತ್ತಲು ಅವನಿಗೆ ಸಾಧ್ಯವಾಗಿಲ್ಲ. ಆಗ ಶಿವನೇ ಮನುಷ್ಯ ರೂಪದಲ್ಲಿ ಅವನ ಬಳಿಗೆ ಬಂದು ಅವನ ಹೊರೆಗೆ ತನ್ನ ಹೆಗಲನ್ನೂ ಕೊಟ್ಟನು. ಹೀಗೆ ಇಬ್ಬರೂ ಹೊತ್ತು ಮನೆಗೆ ತಂದು ಹಾಕಿದ ಕೂಡಲೇ ಶಿವನು ಮಾಯವಾಗಿ ಹೋದನು.

ಅವನು ಥಕ್ಕನೆ ಮಾಯವಾದುದನ್ನು ನೋಡಿ ಚಿರುತೊಂಡನು ಆಶ್ಚರ್ಯಪಡುತ್ತ, ಕಬ್ಬಿನ ಜಲ್ಲೆ ಗಳನ್ನು ಕೈಯಿಂದಲೇ ಗಾಣವಾಡಿಸಿ ರಸ ತೆಗೆದು ಬಿಂದಿಗೆಯಲ್ಲಿ ತುಂಬಿಸಿದನು. ಹೀಗೆ ಒಂದು ಬಿಂದಿಗೆ ಕಬ್ಬಿನ ರಸದಿಂದ ಶಿವನಿಗೆ ಅಭಿಷೇಕವಾಯಿತು.

ಕೈಲಾಸದಲ್ಲಿ ಪಾರ್ವತೀದೇವಿ ಶಿವನ ಕಂಠ ಪ್ರದೇಶವೆಲ್ಲಾ ಬೆವರಿನಿಂದ ಒದ್ದೆಯಾಗಿರುವುದನ್ನು ನೋಡಿ ಕಾರಣವೇನೆಂದು ಕೇಳಿದಳು. ಶಿವನು ಅವಳಿಗೆ ಚಿರುತೊಂಡನ ಸಮಾಚಾರವನ್ನು ಹೇಳಿ, "ನನ್ನ ಭಕ್ತನು ಕಬ್ಬಿನ ಹೊರೆ ಹೊತ್ತುಕೊಳ್ಳ ಲಾಗದೆ ಕಷ್ಟಪಡುವುದನ್ನು ನೋಡಿ ಸಹಾಯ ಮಾಡಿದೆನು. ಅವನಿಗೆ ಬೆವರು ಸುರಿದ ಹಾಗೆಯೇ ನನಗೂ ಬೆವರು ಸುರಿಯಿತು" ಎಂದನು. ಅಂತಹ ಭಕ್ತನನ್ನು ತಾನು ಕೂಡಾ ನೋಡಬೇಕೆಂದು ಪಾರ್ವತಿಗೆ ಆಶೆಯಾಯಿತು.





# ಉನ್ನತ ನ್ಯಾಯಸ್ಥಾನ

ಹಿಂದೆ ಲೀಲಾಧರನೆಂಬ ಒಬ್ಬ ರಾಜನು ಚಂಪಕ ದೇಶವನ್ನು ಆಳಿಕೊಂಡಿದ್ದನು. ಅವನ ರಾಣಿಯ ಹೆಸರು ನಂದಿನೀದೇವಿ. ರಾಜನು ಆಕೆಯನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದನು. ಅವಳ ಮನಸ್ಸಿಗೆ ಸ್ವಲ್ಪವೂ ನೋವಾಗದಂತೆ ನೋಡಿಕೊಳ್ಳುತ್ತಿದ್ದನು.

ನಂದಿನೀದೇವಿಗೆ ಪ್ರೀತಿಯ ತಮ್ಮನೊಬ್ಬನು ಅಲ್ಲಿಗೇ ಬಂದು ಸೇರಿದ್ದನು. ಅವನ ಹೆಸರು ನಾಗಸೇನ. ತನ್ನ ಮೇಲೆ ಅಕ್ಕಯ್ಯನಿಗಿರುವ ಪ್ರೀತಿಯನ್ನು ಸಾಧಕಪಡಿಸಿಕೊಂಡು, ರಾಜ್ಯಪಾಲನೆಯಲ್ಲಿ ತನ್ನ ಇಷ್ಟಪ್ರಕಾರ ತಲೆತೂರಿಸಿ ಏನೇನೋ ಮಾಡಿಸುತ್ತಿದ್ದನು. ಮುಖ್ಯವಾಗಿ ಅವನು ವಿಲಾಸ ಜೀವನಕ್ಕೆ ಇಷ್ಟಪಡುವವನು. ಅದಕ್ಕಾಗಿ ಅವನು ರೈತರಿಂದಲೂ, ವರ್ತಕರಿಂದಲೂ ಅನ್ಯಾಯವಾಗಿ ಹಣ ಕಿತ್ತುಕೊಳ್ಳುತ್ತ, ಯಾರಾದರೂ ಇದಿರಾಡಿಬಿಟ್ಟರೆ, ತಾನು ರಾಜನ ಅನುಮತಿಯಿಂದಲೇ ವರ್ತಿಸುವವನೆಂದು ಹೆದರಿಸುತ್ತಿದ್ದನು.

ಅವನ ಆ ಬಗೆಯ ಅಕ್ರಮ ಅತಿಕ್ರಮಗಳನ್ನು ಪ್ರಜಾಪ್ರಮುಖರೂ, ರಾಜೋದ್ಯೋಗಿಗಳೂ ಅನೇಕ ಬಾರಿ ರಾಜನ ದೃಷ್ಟಿಗೆ ತಂದರು. ಆದರೂ ರಾಜನು ತನ್ನ ಹೆಂಡತಿಯ ಪ್ರಿಯನಾದ ತಮ್ಮ ಬಾವಮೈದುನನನ್ನು ಏನಾದರೂ ಹೇಳಿದರೆ, ಹೆಂಡತಿಯ ಮನಸ್ಸಿಗೆ ನೋವಾಗುತ್ತದೆಂದುಕೊಂಡು ಮಾತಾಡದೆ ಸುಮ್ಮನಿದ್ದುಬಿಡುತ್ತಿದ್ದನು.

ಒಂದು ದಿನ ಜಯಮಲ್ಲನೆಂಬ ಯುವಕನು ತನ್ನ ಹತ್ತಿರವಿದ್ದ ಎರಡು ಕುದುರೆಗಳನ್ನು ವಿಕ್ರಯಿಸಬೇಕೆಂದು ರಾಜಧಾನಿಗೆ ತಂದನು. ಸಂತೆಬೀದಿಯಲ್ಲಿ ಹೋಗುತ್ತಿದ್ದ ನಾಗಸೇನನು ಆ ಕುದುರೆಗಳನ್ನು ನೋಡಿ ಜಯಮಲ್ಲನ ಹತ್ತಿರ ಬಂದನು.

ಅವನು ಕುದುರೆಗಳನ್ನು ಕೊಂಡುಕೊಳ್ಳಲು ಬಂದವನೆಂದುಕೊಂಡು ಜಯಮಲ್ಲನು, ಅವುಗಳ ಬೆಲೆಯನ್ನು ಹೇಳಲು ಬಾಯಿ ತೆರೆಯುವಷ್ಟರಲ್ಲಿ, ನಾಗಸೇನನು ಅವನನ್ನು ತಡೆದು, “ಸಂತೆಬೀದಿಗೆ ಬರುವಾಗ ಮೊದಲು ಇವುಗಳಿಗೆ ಸುಂಕವಾಗಿ ಇಪ್ಪತ್ತೈದು ಬೆಳ್ಳಿನಾಣ್ಯ ಕೊಡಬೇಕಾಗಿದೆ. ಅದಕ್ಕೆ ತಪ್ಪಿದ ಪಕ್ಷದಲ್ಲಿ ಒಂದು ಕುದುರೆ ಬಿಟ್ಟುಬಿಡು” ಎಂದನು ದರ್ಪದಿಂದ. ಎಲ್ಲಿಯೂ ಇಲ್ಲದ ಆ ಹೊಸ ಮಾತಿಗೆ ಜಯಮಲ್ಲನು ಆಶ್ಚರ್ಯಪಡುತ್ತ, “ಇನ್ನೂ

ಕಮಲಿನಿ

ಕುದುರೆಯ ವ್ಯಾಪಾರವೇ ಆಗಲಿಲ್ಲ. ಸುಂಕ ಕೊಡಬೇಕೆಂದರೆ - ಏನರ್ಥ ? ಎಲ್ಲಿದೆ ವಿಧಿ ?" ಎಂದು ಕೇಳಿದನು.

ಆ ಮಾತನ್ನು ಕೇಳಿ ನಾಗಸೇನನು ಕೋಪದಿಂದ ಕಣ್ಣು ತಿರುಗಿಸುತ್ತ, "ಲೋ, ನನ್ನನ್ನು ಯಾರೆಂದುಕೊಂಡೆ ? ನನಗೆ ಎದುರಾಡುವಿಯೇನು ?" ಎಂದು ದುರ್ಭಾಷೆಗಳಿಂದ ಬೈಯುತ್ತಾ ಜಯಮಲ್ಲನ ಕೆನ್ನೆಗೊಂದು ಕೊಟ್ಟನು.

ಅದರಿಂದ ಜಯಮಲ್ಲನಿಗೂ ಕೋಪಬಂದು ಒರೆಯಿಂದ ಕತ್ತಿಯನ್ನು ಸೆಳೆದನು. ನಾಗಸೇನನೂ ಕತ್ತಿಯನ್ನು ಸೆಳೆದು ಅವನ ಮೇಲೆ ಬಿದ್ದನು. ಸ್ವಲ್ಪ ಹೊತ್ತು ಇಬ್ಬರಿಗೂ ಕತ್ತಿಯುದ್ಧ ನಡೆದ ಮೇಲೆ, ನಾಗಸೇನನು ಸ್ವಲ್ಪ ಗಾಯಗೊಂಡು ಅಲ್ಲಿಂದ ಓಡಿ ಹೋದನು.

ಅವನು ಸೀದಾ ಲೀಲಾಧರ ರಾಜನ ಬಳಿಗೆ ಹೋಗಿ ನಿಂತನು. ರಾಣಿ ನಂದಿನಿಯೂ, ಮಂತ್ರಿ ಮಕರಂದನೂ ಅಲ್ಲಿಯೇ ಇದ್ದರು.

ನಾಗಸೇನನು ರಾಜನೊಂದಿಗೆ, "ನೋಡಿದಿರಾ, ಯಾವನೋ ಹಳ್ಳಿಯಿಂದ ಬಂದ ಕುದುರೇ ವ್ಯಾಪಾರದವ ಮಹಾ ಗರ್ವಿಷ್ಠ ನನ್ನನ್ನು ಹೊಡೆದು ಗಾಯಪಡಿಸಿಬಿಟ್ಟ. ಸಂತೆಬೀದಿಯಲ್ಲಿದ್ದಾನೆ. ಅವನನ್ನು ಕೂಡಲೇ ಬಂಧಿಸಿ ಕಠಿಣವಾಗಿ ಶಿಕ್ಷಿಸಬೇಕು" ಎಂದು ಹೇಳಿದನು.

ರಾಜನು ಭಟರನ್ನು ಕರೆಯಲು ನೋಡುವಾಗ ಮಂತ್ರಿ "ಪ್ರಭೂ, ಕಠಿಣವಾಗಿ ಶಿಕ್ಷಿಸುವ ಮಾತು ಆಮೇಲೆ ಇದ್ದೇ ಇದೆ. ಮೊದಲು ಆ ವ್ಯಾಪಾರಿಯನ್ನೂ, ಅಲ್ಲಿರುವ ಸಾಕ್ಷಿಗಳನ್ನೂ ಕರೆಯಿಸೋಣ ಆಗ ನ್ಯಾಯಾನ್ಯಾಯಗಳ ವಿಚಾರಣೆ ಸುಲಭವಾಗುತ್ತದೆ" ಎಂದನು.

ಆಗ ರಾಣಿ ನಂದಿನಿ ಬಾಯಿ ತೆರೆದು, "ರಾಜಬಂಧುವಿನ ಮೇಲೆ ಯಾವನೋ ಕೈ ಮಾಡುವುದೆಂದರೆ ಏನು ಗರ್ವ ! ವಿಚಾರಣೆಗೆ ಏನಿದೆ ? ಕ್ಷಣ ಮಾತ್ರದಲ್ಲಿ ಅವನನ್ನು ಕಟ್ಟಿತರಿಸಿ ನೇಣು ಹಾಕಿಸಿ ಬಿಡಿರಿ !" ಎಂದು ಆಜ್ಞೆ ಮಾಡಿದಂತೆ ಹೇಳಿ



ಅಲ್ಲಿಂದೆದ್ದು ರಭಸದಿಂದ ಹೋಗಿಬಿಟ್ಟಳು. ರಾಜನು ಭಟರನ್ನು ನೋಡಿದನು. ಅವರು ಕೂಡಲೇ ಸಂತೆಬೀದಿಗೆ ಹೋಗಿ ಜಯಮಲ್ಲನನ್ನು ಹಿಡಿದು ರಾಜನ ಬಳಿಗೆ ಕರೆದುಕೊಂಡು ಬಂದರು. ಜಯಮಲ್ಲನು ತಾನು ಎಂತಹ ಪರಿಸ್ಥಿತಿಯಲ್ಲಿ ನಾಗಸೇನನ ಮೇಲೆ ಕತ್ತಿ ಎತ್ತಬೇಕಾಗಿ ಬಂತೆಂಬುದನ್ನು ರಾಜನೊಂದಿಗೆ ಬಿನ್ನವಿಸಿಕೊಂಡನು.

ಅವನು ಹೇಳಿದುದೆಲ್ಲ ನಿಜವೆಂದೇ ರಾಜನಿಗೆ ತೋರಿದರೂ, ಸುಂಕದ ವಿಧಿ ಹಾಗೇನೂ ಇಲ್ಲವಾದರೂ ರಾಣಿಗೆ ಕೋಪ ಬರುತ್ತದೆಂದುಕೊಂಡು ಜಯಮಲ್ಲನನ್ನು ಗಲ್ಲಿಗೇರಿಸಿಬಿಡುವಂತೆ ಶಿಕ್ಷೆ ವಿಧಿಸಿಬಿಟ್ಟನು. ಭಟರು ಜಯಮಲ್ಲನನ್ನು ಕಾರಾಗೃಹದ ಕಡೆಗೆ ಎಳೆದುಕೊಂಡು ಹೋದರು. ಮರುದಿನವೇ ಗಲ್ಲಿನ ಶಿಕ್ಷೆ ನೆರವೇರಿಸಲ್ಪಡಲಿತ್ತು.

ರಾಜನ ಮನಸ್ಸಿಗೆ ಸಮಾಧಾನವಿರಲಿಲ್ಲ. ತಾನು ಒಬ್ಬ ನಿರಪರಾಧಿಗೆ ಶಿಕ್ಷೆ ವಿಧಿಸಿಬಿಟ್ಟೆನೆಂದು ಮನಸ್ಸಿನೊಳಗೆ ಕೊರಗತೊಡಗಿದನು. ಬೆಳಗಾದ ಕೂಡಲೇ ಜಯಮಲ್ಲನು ಗಲ್ಲಿಗೇರಿಸಲ್ಪಡುತ್ತಾನೆ. ಈ ಸಂಕಟದಲ್ಲಿ ರಾತ್ರಿ ಎಷ್ಟು ಹೊರಳಾಡಿದರೂ ರಾಜನಿಗೆ ನಿದ್ದೆ ಬರಲಿಲ್ಲ.

ಅವನು ಮಂತ್ರಿಯನ್ನು ಕರೆಯಿಸಿ, "ಮಹಾರಾಣಿಗೆ ನೋವಾಗದಂತೆ ಜಯಮಲ್ಲನನ್ನು ಗಲ್ಲಿನ ಶಿಕ್ಷೆಯಿಂದ ತಪ್ಪಿಸಲು ಉಪಾಯವೇನಾದರೂ ಇದೆಯೇ ?" ಎಂದು ಕೇಳಿದನು.

ಮಂತ್ರಿ ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಪ್ರಭೂ, ಇದಕ್ಕೆ ಒಂದು ಮಾರ್ಗವಿದೆ. ಆ ಜಯಮಲ್ಲನಿಂದ ರಾಣಿಯೊಂದಿಗೂ, ನಾಗಸೇನನೊಂದಿಗೂ ಕ್ಷಮಾಪಣೆ ಕೇಳಿಸಿ ಪ್ರಾಣಭಿಕ್ಷೆ ನೀಡಿಸುವಂತೆ ಮಾಡಬಹುದು. ಆಮೇಲೆ ಅವನಿಗೆ ಸ್ವಲ್ಪದಿನ ಕಾರಾಗೃಹ ಶಿಕ್ಷೆ ನೀಡಿದರೆ ಸಾಕು" ಎಂದು ಆಲೋಚನೆ ಹೇಳಿದನು.

ಅದರಂತೆ ರಾಜನೂ ಮಂತ್ರಿಯೂ ಕಾರಾಗೃಹಕ್ಕೆ ಹೋದರು. ಮಂತ್ರಿ ಜಯಮಲ್ಲನೊಂದಿಗೆ, "ನಡೆದುದೇನೋ ನಡೆದು ಹೋಯಿತು. ನಿನಗೆ ಗಲ್ಲಿನ ಶಿಕ್ಷೆ



ತಪ್ಪ ಬೇಕಾದರೆ ಮಹಾರಾಣಿ ಮತ್ತು ನಾಗಸೇನರ ಹತ್ತಿರ ನೀನು ಕ್ಷಮಾಪಣೆ ಕೇಳಬೇಕು " ಎಂದನು.

ಅದನ್ನು ಕೇಳಿ ಜಯಮಲ್ಲನು ಮುಗುಳು ನಗು ತೋರಿಸುತ್ತ, "ಇನ್ನು ಸ್ವಲ್ಪ ಹೊತ್ತಿನ ಮೇಲೆ ಮಹಾರಾಜರ ತೀರ್ಪಿನಂತೆ ಉನ್ನತ ನ್ಯಾಯಾಸ್ಥಾನದಲ್ಲಿ ಫಿರ್ಯಾದಿಮಾಡಲು ಹೋಗುತ್ತೇನೆ. ನನ್ನನ್ನು ಶಿಕ್ಷಿಸಿಬಿಡಿರಿ. ನನಗೆ ಇಲ್ಲಿರುವ ಯಾರಿಂದಲೂ ಕ್ಷಮೆ ಬೇಕಾಗಿಲ್ಲ. ಪ್ರಾಣಭಿಕ್ಷೆ ಬೇಡ. ನನ್ನದು ಭಿಕ್ಷೆಪಡೆದು ತಂದುಕೊಂಡ ಪ್ರಾಣವಲ್ಲ" ಎಂದನು.

ಆ ಮಾತು ಕೇಳಿ ರಾಜನು ಕೋಪದಿಂದ, "ಈ ರಾಜ್ಯದಲ್ಲಿ ರಾಜನನ್ನು ವಿಚಾರಿಸುವ ಉನ್ನತ ನ್ಯಾಯಾಸ್ಥಾನವಿದೆಯೇನು ? ನಿನಗೆ ಮರಣಶಿಕ್ಷೆ ವಿಧಿಸಿದ ನಾನು ಕರುಣೆಯಿಂದ ಜೀವ ಉಳಿಸಲು ಬಂದರೆ ಯಾವುದೋ ಉನ್ನತ ನ್ಯಾಯಾಸ್ಥಾನ ವೆಂದು ಬೊಗಳುವಿಯಾ ? ಏನು ಗರ್ವ ನಿನಗೆ !" ಎಂದನು.

ರಾಜನ ಮಾತಿಗೆ ಜಯಮಲ್ಲನು ಸ್ವಲ್ಪವೂ ತಡಬಡಿಸದೆ, "ರಾಜನೆಂದರೆ ಭೂಮಿಯ ಮೇಲೆ ಭಗವಂತನ ಪ್ರತಿನಿಧಿಯಾಗಿರುವವನೆಂದು ದೊಡ್ಡ ವರು ಹೇಳುತ್ತಾರೆ. ವೈಯಕ್ತಿಕವಾದ ಇಷ್ಟಾನಿಷ್ಟ ಗಳಿಗೆ ಒಳಗಾಗದೆ, ನಿಷ್ಪಕ್ಷಪಾತವಾಗಿ ನ್ಯಾಯ ಪ್ರದರ್ಶನ ಮಾಡಬೇಕಾದುದು ರಾಜನ ಬಾಧ್ಯತೆ ಯಾಗಿರುವಾಗ, ಹಾಗೆ ನಡೆಸಲು ಅವನಿಗೆ ಸಾಧ್ಯ ವಾಗದೆ ಹೋದರೆ, ಅವನ ತೀರ್ಪನ್ನು ಮತ್ತೆ ಪರಿಶೀಲನೆಮಾಡಿ, ಸರಿಯಾದ ನ್ಯಾಯವನ್ನು ಹೊರ ಪಡಿಸಲು ಆ ಭಗವಂತನೊಬ್ಬನಿಗೇ ಸಾಧ್ಯ. ನಿಮ್ಮ ತೀರ್ಪಿನ ಮೇಲೆ ನಾನು ಫಿರ್ಯಾದಿ ಮಾಡ ಲಿರುವುದು ಆ ಉನ್ನತ ನ್ಯಾಯಾಸ್ಥಾನದಲ್ಲಿಯೇ. ನೀವು ನಿಶ್ಚಿಂತೆಯಾಗಿ ನಿಮ್ಮ ತೀರ್ಪಿನಂತೆ ನನ್ನನ್ನು ಗಲ್ಲಿಗೇರಿಸಬಹುದು " ಎಂದನು.

ಜಯಮಲ್ಲನು ಹೇಳಿದ ಮಾತುಗಳನ್ನು ಕೇಳು ತ್ತಿದ್ದಂತೆ ರಾಜನ ಮಸ್ತಿಷ್ಕದಲ್ಲಿ ಜ್ಞಾನದ ಬೆಳಕು ಹೊರಟಿತು. ನ್ಯಾಯ ಪಾಲನೆಯ ಮಹತ್ವವು ಎಷ್ಟು ಪವಿತ್ರವಾದುದೆಂದು ಅವನಿಗೆ ಗೊತ್ತಾಯಿತು.

ಲೀಲಾಧರ ರಾಜನು ಆಗಿಂದಾಗಲೇ ಜಯ ಮಲ್ಲನನ್ನು ಕಾರಾಗೃಹದಿಂದ ಬಿಡುಗಡೆ ಮಾಡಿಸಿ ದನು. ಬೆಳಗಾಗುವಾಗ ರಾಜನ ಗುಣವು ಬದ ಲಾಯಿಸಿ ಹೋಗಿತ್ತು. ಅಂದಿನಿಂದ ಅವನು ರಾಣಿಯ ಮೇಲಿನ ಮೋಹವನ್ನು ಹದ್ದಿನಲ್ಲಿಟ್ಟು ಕೊಂಡು, ನಾಗಸೇನನ ಗರ್ವವು ಅಡಗುವಂತೆಮಾಡಿ, ಪ್ರಜೆಗಳಿಗೆಲ್ಲಾ ಸರಿಯಾದ ನ್ಯಾಯವು ನಡೆಯು ವಂತೆ, ಜಾಗರೂಕತೆಯಿಂದ ನೋಡಿಕೊಳ್ಳುತ್ತ, ಧರ್ಮ ಪ್ರಭುವೆಂಬ ಹೆಸರಿಗೆ ಪಾತ್ರನಾದನು.





# ಸ್ನೇಹದಲ್ಲಿ ಕಸ

ವರಾಹಸ್ವಾಮಿ ಎಂಬವನು ನಾಗಪಟ್ಟಣದಲ್ಲಿ ವಣಿಕ ಪ್ರಮುಖನಾಗಿದ್ದನು. ಒಂದು ದಿನ ಅವನ ಬಳಿಗೆ ಶೇಷನಾಥನೆಂಬ ಅವನ ಸ್ನೇಹಿತನೊಬ್ಬನು ಬಂದು, "ನೋಡಪ್ಪಾ, ಜೀವನ ಪ್ರವಾಹದಲ್ಲಿ ಇದಿರು ಸೆಳೆತ ಬಹಳ ಜೋರಾಗಿರುತ್ತದೆ. ಬಹಳ ಪೆಟ್ಟು ತಿಂದೆನು, ಈಗ ನನಗೆ ತಾಯಿ ತಂದೆಯರನ್ನೂ, ಹೆಂಡತಿ ಮಕ್ಕಳನ್ನೂ ಪೋಷಿಸಲು ಸಾಧ್ಯವಿಲ್ಲದಂತಾಗಿದೆ. ನಮ್ಮೊಳಗಿನ ಚಿಕ್ಕಂದಿನ ಸ್ನೇಹವನ್ನು ನೆನಪಿಗೆ ತಂದುಕೊಂಡು ನಿನ್ನ ಹತ್ತಿರ ಬಂದಿದ್ದೇನೆ. ನೀನು ಸಹಾಯ ಮಾಡಬೇಕು" ಎಂದನು.

ವರಾಹಸ್ವಾಮಿಯೂ ಶೇಷನಾಥನೂ ಚಿಕ್ಕತನದಲ್ಲಿ ಒಂದೇ ಗ್ರಾಮದಲ್ಲಿ ನೆರೆಹೊರೆಯವರಾಗಿ ಕೂಡಾಡಿಕೊಂಡಿದ್ದರು. ಶೇಷನಾಥನು ಮಿತಭಾಷಿ. ದಾಕ್ಷಿಣ್ಯದ ಸ್ವಭಾವ. ವರಾಹಸ್ವಾಮಿ ಚುರುಕುತನವುಳ್ಳವನು. ಚೆನ್ನಾಗಿ ಗಲಾಟೆ ಮಾಡುವಂಥವನು. ಅವನು ಮಾಡಿದ ತಪ್ಪುಗಳನ್ನೂ, ಕೆಟ್ಟ ಕೆಲಸಗಳನ್ನೂ ಶೇಷನಾಥನ ಮೇಲೆ ಹೊರಿಸಿ ತಪ್ಪಿಸಿಕೊಳ್ಳುವನು. ಆದರೆ ಶೇಷನಾಥನು ವರಾಹಸ್ವಾಮಿಯ ತಪ್ಪುಗಳನ್ನು ಹೊರಗೆ ಹಾಕದೆ, ದೂರಿಕೊಳ್ಳದೆ ಮೌನವಾಗಿ ಪೆಟ್ಟುಗಳನ್ನೂ, ಬೈಗುಳನ್ನೂ ಸುಮ್ಮನೆ ನುಂಗಿಕೊಳ್ಳುವನು.

ಕಾಲಕ್ರಮದಲ್ಲಿ ವರಾಹಸ್ವಾಮಿ ಶೇಷನಾಥನ ಒಳ್ಳೆಯತನಗಳನ್ನು ಮನದಂದುಕೊಂಡನು. ಇಬ್ಬರೂ ಒಳ್ಳೆಯ ಸ್ನೇಹಿತರೇ ಆದರು. ಮುಂದೆ ದೊಡ್ಡವರಾದಾಗ ವರಾಹಸ್ವಾಮಿ ವ್ಯಾಪಾರ ಮಾಡಲು ಪಟ್ಟಣಕ್ಕೆ ಹೋದನು. ಶೇಷನಾಥನು ಗ್ರಾಮದೊಳಗೇ ಇದ್ದನು. ಏನಾದರೂ ಕೆಲಸವಿದ್ದರೆ ಶೇಷನಾಥನು ಪಟ್ಟಣಕ್ಕೆ ಹೋದಾಗ ವರಾಹಸ್ವಾಮಿಯನ್ನು ಸಂಧಿಸದಿರುವುದಿಲ್ಲ.

ಈಗ ಶೇಷನಾಥನು ಹೇಳಿದ ಮಾತುಗಳನ್ನು ಕೇಳಿ ವರಾಹಸ್ವಾಮಿ ನೊಂದುಕೊಳ್ಳುತ್ತ, "ಶೇಷನಾಥಾ, ನಿನ್ನಂತಹ ಮಿತ್ರನಿಗೆ ಸಹಾಯ ಮಾಡದಿದ್ದರೆ ನಾನು ಬದುಕಿದ್ದು ಏನು ಪ್ರಯೋಜನ? ನನ್ನ ಐಶ್ವರ್ಯಕ್ಕೆ ಏನು ಸಾರ್ಥಕತೆ? ಹಳ್ಳಿಯಲ್ಲಿ ನಿನಗಿರುವುದನ್ನೆಲ್ಲಾ ಕುಟ್ಟಿಮಾರಿ ಪಟ್ಟಣಕ್ಕೇ ಬಂದುಬಿಡು. ನಿನ್ನ ಹಣವನ್ನೇ ಮೂಲ ಧನವಾಗಿ ಮಾಡಿಕೊಂಡು ನಿನ್ನನ್ನು ನನ್ನ ವ್ಯಾಪಾರದಲ್ಲಿ ಭಾಗಸ್ವಾಮಿಯನ್ನಾಗಿ ಮಾಡಿಕೊಳ್ಳುತ್ತೇನೆ" ಎಂದನು.

"ವಸುಂಧರ"



ಆದರೆ ಶೇಷನಾಥನು ತನ್ನ ಪರಿಮಿತಿಯನ್ನು ತಿಳಿದು ಕೊಂಡು, ವರಾಹಸ್ವಾಮಿಯ ಹತ್ತಿರ ವಿಧೇಯತೆ ಯಿಂದಲೇ ಇರುತ್ತ, ಅವನ ಪದ್ಧತಿಗಳನ್ನು ಮೆಚ್ಚಿ ಕೊಳ್ಳುತ್ತಲೂ ಇದ್ದನು. ಒಂದುಸಾರಿ ಕೂಡಾ ಅವನು ಹಾಗಲ್ಲ ಹೀಗೆಂದು ವರಾಹಸ್ವಾಮಿಯ ಲೋಪ ತೋರಿಸಲಿಲ್ಲ. ಸಂಗತಿ ಏನೆಂದರೆ ಶೇಷನಾಥನಿಗೆ ಪ್ರಪಂಚ ಜ್ಞಾನ ಹೆಚ್ಚೇ ಇದ್ದಿತು. ಅವನಿಂದ ಒಳ್ಳೆಯ ಆಲೋಚನೆಗಳು ಲಭಿಸುತ್ತವೆಂಬ ಹೆಸರು ಪಟ್ಟಣ ದಲ್ಲಿ ವ್ಯಾಪಿಸಿಕೊಂಡು ಬರುತ್ತಿತ್ತು. ಶೇಷನಾಥನ ಆಲೋಚನೆಗಳ ಕಾರಣದಿಂದಾಗಿ ಅನೇಕರು ತಮ್ಮ ಲೋಪಗಳನ್ನು ತಿದ್ದಿಕೊಂಡು ಚೆನ್ನಾದರೆಂಬ ವಿಷಯವು ಕ್ರಮವಾಗಿ ವರಾಹಸ್ವಾಮಿಗೆ ತಿಳಿಯಿತು.

ವರಾಹಸ್ವಾಮಿ ಆಶ್ಚರ್ಯಪಡುತ್ತ ಶೇಷನಾಥ ನೊಂದಿಗೆ, "ನಿನ್ನಲ್ಲಿ ಇಷ್ಟೊಂದು ಪ್ರತಿಭೆ ಇರುವು ದೆಂದು ನನಗೆ ಗೊತ್ತಾಗಲಿಲ್ಲ. ನೀನು ಒಂದುದಿನ ಕೂಡಾ ನನ್ನಲ್ಲಿರುವ ಲೋಪವನ್ನು ಎತ್ತಿ ತೋರಿಸ ಲಿಲ್ಲವಷ್ಟೆ ?" ಎಂದನು.

"ನಿನ್ನಲ್ಲಿ ಲೋಪವಿದ್ದರೆ ತಾನೇ ಎತ್ತಿ ತೋರಿಸ ಲಿಕ್ಕೆ ?" ಎಂದನು ಶೇಷನಾಥ. ಆದನ್ನು ಕೇಳಿ ವರಾಹಸ್ವಾಮಿಗೆ ಹೆಮ್ಮೆ ಎನಿಸಿತು.

ಹೀಗಿರುವಾಗ ವರಾಹಸ್ವಾಮಿಯ ಮಗ ಒಂದು ಬಡ ಕುಟುಂಬದ ಹುಡುಗಿಯನ್ನು ಮದುವೆ ಮಾಡಿ ಕೊಳ್ಳಲು ತಯಾರಾದನು. ವರಾಹಸ್ವಾಮಿ ಆ ಹುಡುಗಿಯನ್ನು ಸೊಸೆಯಾಗಿ ಮಾಡಿಕೊಳ್ಳಲು ಅಂಗೀಕಾರ ತೋರಿಸಲಾಗದೆ ಹೋದನು. ಮಗನು ಕೋಪದಿಂದ ಮನೆ ಬಿಡುತ್ತೇನೆಂದನು.

"ಹೋಗುವುದಾದರೆ ಹೋಗಿಬಿಡಲಿ. ಬಡತನ ವೆಂದರೆ ಏನೆಂದು ಅವನಿಗೇ ತಿಳಿಯುತ್ತದೆ." ಎಂದು ವರಾಹಸ್ವಾಮಿ ಶೇಷನಾಥನೊಂದಿಗೆ ಆ ಸಂಗತಿ ಯನ್ನು ಹೇಳಿಕೊಂಡನು. ಶೇಷನಾಥನು ಏನೂ ಹೇಳದೆ ತಲೆಯಾಡಿಸಿ ಸುಮ್ಮನಾದನು.

ಆದನ್ನು ಕೇಳಿ ಶೇಷನಾಥನು ವರಾಹಸ್ವಾಮಿ ಹೇಳಿದ ಹಾಗೆಯೇ ಮಾಡಿದನು. ಪಟ್ಟಣದಲ್ಲಿ ವರಾಹಸ್ವಾಮಿಯಿಂದಾಗಿ ಶೇಷನಾಥನಿಗೆ ಒಳ್ಳೆಯ ಮನೆ ಸಿಕ್ಕಿತು. ಶೇಷನಾಥನ ಅಗತ್ಯಗಳು ಏನೆಂಬು ದನ್ನು ಕೇಳಿ ಕೇಳಿ ವರಾಹಸ್ವಾಮಿ ತೀರಿಸಿಬಿಡು ತ್ತಿದ್ದನು. ಅಷ್ಟೇ ಅಲ್ಲದೆ ಶೇಷನಾಥನಿಗೆ ತಿಂಗಳಿಗೆ ಸಾವಿರ ವರಹ ಸಂಬಳವನ್ನೂ ಕೊಡುತ್ತಿದ್ದನು.

ಇದರಿಂದಾಗಿ ಶೇಷನಾಥನ ಜೀವನಕ್ರಮವು ಚೆನ್ನಾಯಿತು. ಅವನ ಮನೆಯವರೆಲ್ಲರೂ ವರಾಹ ಸ್ವಾಮಿಯನ್ನು ದೇವರೆಂದುಕೊಳ್ಳುತ್ತಿದ್ದರು.

ವರಾಹಸ್ವಾಮಿ ಶೇಷನಾಥನೊಂದಿಗೆ, "ನೀನು ನನ್ನ ಕೈಕೆಳಗೆ ಉದ್ಯೋಗಸ್ಥನಲ್ಲ. ವ್ಯಾಪಾರದಲ್ಲಿ ನನ್ನೊಂದಿಗೆ ಭಾಗಸ್ವಾಮಿಯಾಗಿರುವವನು, ಕೇವಲ ನನಗೆ ಸಹಾಯ ಮಾಡುವ ಕೆಲಸ ಮಾತ್ರವೆಂದು ತಿಳಿಯದೆ, ನನ್ನಲ್ಲಿ ಲೋಪಗಳಿದ್ದರೆ ಆದನ್ನು ನನಗೆ ತಿಳಿಸುತ್ತಲೂ ಇರಬೇಕು" ಎಂದನು.

ಅದೇ ಸಮಯದಲ್ಲಿ ವರಾಹಸ್ವಾಮಿಯಂತೆಯೇ ವ್ಯಾಪಾರಸ್ಥನಾದ ಧನಗುಪ್ತನಿಗೂ ಇದೇ ಸಮಸ್ಯೆ ಇದಿರಾಯಿತು. ಆದರೆ ಅವನು ವರಾಹಸ್ವಾಮಿಯಂತೆ ಮಾಡದೆ, ಬಡ ಹುಡುಗಿಯನ್ನು ಸೊಸೆಯನ್ನಾಗಿ ತಂದುಕೊಂಡು ಬಿಟ್ಟಿದ್ದನು. ಇದನ್ನು ತಿಳಿದು ವರಾಹಸ್ವಾಮಿ ಅದರಲ್ಲಿಯ ಆಗು ಹೋಗುಗಳನ್ನು ತಿಳಿಯಲು ಧನಗುಪ್ತನ ಮನೆಗೆ ಹೋಗಿ ಅವನನ್ನು ಸಂಧಿಸಿ ಮಾತಾಡಿಸಿದನು.

ಧನಗುಪ್ತನು ಅವನೊಂದಿಗೆ, "ಒಂದುಸಾರಿ ಒಡೆದ ಮನಸ್ಸುಗಳು ಮತ್ತೆ ಅಂಟಿಕೊಳ್ಳುವುದು ಕಷ್ಟ. ನೀವು ಈ ಮದುವೆಗೆ ಒಪ್ಪಿಕೊಂಡರೆ ನಿಮ್ಮ ಮಗನೂ, ಸೊಸೆಯೂ ಸಹಾ ನಿಮ್ಮ ಮೇಲೆ ಕೃತಜ್ಞತೆಯಿಂದಲೇ ಇರುತ್ತಾರೆ. ನಿಮ್ಮನ್ನು ಭಕ್ತಿ ಗೌರವಗಳಿಂದ ಸೇವಿಸುತ್ತಾರೆ. ಮಗನನ್ನು ಮನೆಯಿಂದ ಹೊರಡಿಸಿಬಿಟ್ಟರೆ ನಿಮ್ಮ ಹೆಂಡತಿಗೆ ಯಾವಾಗಲೂ ದುಃಖವಾಗಿರುತ್ತದೆ. ಮನೆಯೊಳಗೆ ಸುಖವೂ ಶಾಂತಿಯೂ ಇರುವುದಿಲ್ಲ. ಎಷ್ಟು ಧನ ವಿದ್ದರೂ ಸುಖ ಶಾಂತಿಗಳಿಲ್ಲದಿದ್ದರೆ ಜೀವಿಸುವುದರಿಂದ ಏನು ಪ್ರಯೋಜನವಿದೆ?" ಎಂದನು.

ಅವನ ಮಾತು ಕೇಳಿ ವರಾಹಸ್ವಾಮಿ ಸಂತೋಷಪಡುತ್ತ, "ನೀವು ಬಹಳ ತಿಳುವಳಿಕೆಯುಳ್ಳವರು. ಇಷ್ಟೆಲ್ಲ ಆಲೋಚನೆ ನನಗೆ ತಟ್ಟಲೇ ಇಲ್ಲ. ಎಲ್ಲರಿಗೂ ಒಳ್ಳೆಯ ಆಲೋಚನೆ ಹೇಳುವನೆಂದು ಹೆಸರು ಪಡೆದ ಶೇಷನಾಥನಿಗೆ ಕೂಡಾ ಈ ಆಲೋಚನೆ ಬರಲಿಲ್ಲ" ಎಂದು ಧನಗುಪ್ತನನ್ನು ಮೆಚ್ಚಿಕೊಂಡನು.

ಧನಗುಪ್ತನು ಆಶ್ಚರ್ಯದಿಂದ, "ಅದೇನು ಹೇಳುವಿರಿ? ಇಷ್ಟೆಲ್ಲ ಆಲೋಚನೆ ನನ್ನ ಬುದ್ಧಿಗೆ ಬರುವಂತೆ ಹಿತ ನುಡಿದವನು ನಿಮ್ಮ ಸ್ನೇಹಿತನಾದ ಶೇಷನಾಥನೇ" ಎಂದನು.

ಅದನ್ನು ಕೇಳಿ ವರಾಹಸ್ವಾಮಿ ಬೆರಗಾದನು. ಅವನು ಅಲ್ಲಿಂದ ಮನೆಗೆ ಹಿಂದಿರುಗಿದನು. ಈ



ವಿಷಯದಲ್ಲಿ ಶೇಷನಾಥನನ್ನು ಕೇಳಬೇಕೆಂದು ಅವನಿಗೆ ತೋರಿತು. ಆದರೆ ಕೂಡಲೇ ಅವನಿಗೆ ಒಂದು ಅನುಮಾನ ಬಂತು. ಶೇಷನಾಥನು ಬಹಳ ಹೀನಸ್ಥಿತಿಗೆ ಬಿದ್ದು ತನ್ನ ಬಳಿಗೆ ಬಂದವನು. ಅವನಿಗೆ ತನ್ನ ಮೇಲೆ ಅಸೂಯೆ ಇದೆಯೋ ಏನೋ? ತಾನು ಸುಖ ಶಾಂತಿಯಿಂದಿರುವುದು ಅವನಿಗೆ ಇಷ್ಟವಿಲ್ಲವಾಗಿರಬೇಕು.

ಈ ಅನುಮಾನದ ಹುಳುಹೊಕ್ಕ ಮೇಲೆ ವರಾಹಸ್ವಾಮಿ ಶೇಷನಾಥನನ್ನು ತೀವ್ರವಾಗಿ ಪರೀಕ್ಷಿಸಲು ತೊಡಗಿದನು. ಅವನು ತನಗೆ ಚಿಕ್ಕ ಚಿಕ್ಕ ವಿಷಯಗಳಲ್ಲಿ ಕೂಡಾ ಆಲೋಚನೆ ಹೇಳುವುದಿಲ್ಲವೆಂದು ತಿಳಿದ ಮೇಲೆ ಅವನ ಮನಸ್ಸು ವಿಕಲವಾಗಿ ಹೋಯಿತು. ತನ್ನಿಂದ ಸಹಾಯ ಹೊಂದಿದ ಶೇಷನಾಥನು ತನಗೆ ಸಹಾಯ ಮಾಡುವುದಿಲ್ಲವೆಂದೂ, ಇನ್ನು ಈ ಪ್ರಪಂಚದಲ್ಲಿ ಯಾರಿಗೂ ಸಹಾಯ ಮಾಡಬಾರದೆಂದೂ ಅವನು ನಿಶ್ಚಯಿಸಿಕೊಂಡನು.

ಮತ್ತೆ ಎರಡು ದಿನದಲ್ಲಿ ಗುರು ಸದಾನಂದ ನೆಂಬವನು ವರಾಹಸ್ವಾಮಿಯನ್ನು ನೋಡಲು ಬಂದನು. ಈ ಸದಾನಂದನು ವರಾಹಸ್ವಾಮಿಯ ಕುಲಗುರುವಿನಂಥವರು. ಅವರು ವರುಷದಲ್ಲಿ ಯಾವುದೋ ಒಂದು ದಿನ ಬಂದು ವರಾಹ ಸ್ವಾಮಿಯ ಕುಟುಂಬ ಪರಿಸ್ಥಿತಿಯನ್ನು ವಿಚಾರಿಸಿ ಹೋಗುತ್ತಿದ್ದರು.

ಈ ಸಾರಿ ವರಾಹಸ್ವಾಮಿ ಅವರೊಂದಿಗೆ ಶೇಷ ನಾಥನ ಕೃತಘ್ನತೆಯನ್ನು ಹೇಳಿಕೊಂಡು ಸಂಕಟ ಪಟ್ಟನು.

ಅದನ್ನು ಕೇಳಿ ಸದಾನಂದರು, "ಚೆನ್ನಾಗಿದೆ ನಿನ್ನ ಮಾತು. ನಾನು ಈಗ ಇಲ್ಲಿಗೆ ಬರಲು ಅವನೇ ಕಾರಣನಾಗಿದ್ದಾನೆ ಗೊತ್ತಾ? ನಿನಗೆ ಈಗ ಮಗನ ವಿಷಯದಲ್ಲಿ ನನ್ನ ಆಲೋಚನೆಯ ಅಗತ್ಯವಿದೆ ಯೆಂದು ಅವನು ಹೇಳಿದುದರಿಂದ ನಾನು ಬಂದಿ ದ್ದೇನೆ. ಏನಾಗಿದೆ ಇಲ್ಲಿ?" ಎಂದರು.

ವರಾಹಸ್ವಾಮಿ ಆಶ್ಚರ್ಯಪಡುತ್ತ, "ತಾನು ಸ್ವತಃ ನನ್ನ ಹತ್ತಿರ ಹೇಳುವುದನ್ನು ಹೇಳದೆ ನಿಮ್ಮನ್ನು ಕಳುಹಿಸಿದುದರಲ್ಲಿ ಅವನ ಉದ್ದೇಶವೇನಿರ ಬಹುದು?" ಎಂದನು.

ಆ ಪ್ರಶ್ನೆಗೆ ಸದಾನಂದರು ನಕ್ಕು, "ನೀನು ಜೀವಿತದಲ್ಲಿ ಒಳ್ಳೆಯ ಸ್ಥಿತಿಗೆ ಬಂದವನು. ಶೇಷ ನಾಥನು ಶಿಥಿಲನಾಗಿ ಹೋಗಿ, ನಿನ್ನಿಂದ ಒಳ್ಳೆಯ ಸ್ಥಿತಿಗೆ ಬಂದಿದ್ದಾನೆ. ಅವನಿಗೆ ನೀನು ಸಹಾಯ ಮಾಡಿದವನೆಂಬ ಕೃತಜ್ಞತೆಯಲ್ಲಿ ಅವನು ನಿನಗೆ ಆಲೋಚನೆ ಹೇಳಲು ದಾಕ್ಷಿಣ್ಯಪಡುವುದು ಸಹಜವೇ" ಎಂದರು.

"ಸಹಾಯ ಕೇಳುವಾಗ ದಾಕ್ಷಿಣ್ಯವಿಲ್ಲದವನಿಗೆ, ನನ್ನ ಲೋಪಗಳನ್ನು ಹೇಳುವುದರಲ್ಲಿ ಮಾತ್ರ ದಾಕ್ಷಿಣ್ಯವೇಕೆ ಬರಬೇಕು?" ಎಂದು ಕೇಳಿದನು ವರಾಹಸ್ವಾಮಿ.

"ತನಗೆ ಸಹಾಯ ಮಾಡಿದವನಿಗೆ ಆಲೋಚನೆ ಹೇಳಲು ಅವನಿಂದಾಗದಿದ್ದರೆ ಅದರ ತಪ್ಪು, ಅವನ ದಲ್ಲ, ನಿನ್ನದೇ" ಎಂದರು ಸದಾನಂದರು.

ವರಾಹಸ್ವಾಮಿಗೆ ಗುರುಗಳು ಹೇಳಿದ್ದು ಥಕ್ಕನೆ ಅರ್ಥವಾಗದಿದ್ದರೂ ನಿಧಾನವಾಗಿ ಅರ್ಥವಾಯಿತು. ಕೂಡಲೇ ಬಗ್ಗಿ ಗುರುಗಳ ಪಾದ ಹಿಡಿದನು.

ತಾನು ಶೇಷನಾಥನೊಂದಿಗೆ ಸ್ನೇಹಿತನಂತಿರುವು ದನ್ನು ಬಿಟ್ಟು, ಸಹಾಯಮಾಡಿದ ದಾತನಂತೆ ಪ್ರವರ್ತಿಸಿದೆನೆಂದು ಅರಿತು, ವರಾಹಸ್ವಾಮಿಯ ಮನಸ್ಸು ಪರಿಶುದ್ಧವಾಯಿತು. ಶೇಷನಾಥನ ಪ್ರವರ್ತನೆಗೆ ಕಾರಣ ತಿಳಿದ ಮೇಲೆ ತನ್ನ ಲೋಪ ಸರಿಪಡಿಸಿ ಸ್ನೇಹಿತನಂತೆಯೇ ನೋಡತೊಡಗಿದನು. ಇಬ್ಬರೂ ಒಳ್ಳೆಯ ಮಿತ್ರರಾಗಿದ್ದರು.



# ಉಳಿತಾಯ

ಚಂದ್ರರಾಜನು ಧಾರಾಳ ಹಣ ಖರ್ಚು ಮಾಡುವವನು. ಥಕ್ಕನೆ ಅವನಿಗೆ ಉಳಿತಾಯದಲ್ಲಿರಬೇಕೆಂಬ ಆಲೋಚನೆ ಬಂತು. ಅದಕ್ಕೆ ಏನು ಮಾಡಬೇಕೆಂದು ಸ್ನೇಹಿತನಾದ ರಂಗನಾಥನನ್ನು ಕೇಳಿದನು. ರಂಗನಾಥನು ಅವನಿಗೆ ಒಂದು ಮಣ್ಣಿನ ಹುಂಡಿ ಪಾತ್ರ ತಂದುಕೊಟ್ಟು, "ನಿನ್ನ ಉಳಿತಾಯ ಇದರಿಂದ ಪ್ರಾರಂಭವಾಗಲಿ" ಎಂದನು.

ಚಂದ್ರರಾಜನು ಆ ಹುಂಡಿಯೊಳಗೆ ಸ್ವಲ್ಪ ಹಣವನ್ನು ಹಾಕಿ, ಒಂದು ವಾರ ಕಳೆಯುವುದರೊಳಗೆ, ಏನೋ ಅಗತ್ಯ ಬಂದು ಹುಂಡಿಯನ್ನು ಒಡೆದು ಸೇರಿದ ಹಣವನ್ನು ಖರ್ಚು ಮಾಡಿದನು. ಈ ಸಂಗತಿ ತಿಳಿದು ರಂಗನಾಥನು ಕಬ್ಬಿಣದಲ್ಲಿ ಮಾಡಿದ ಹುಂಡೀ ಡಬ್ಬಿ ತಂದುಕೊಟ್ಟು, ಅದರ ಬೀಗದ ಕೈಯನ್ನು ಮನೆಯ ಹತ್ತಿರವಿದ್ದ ಪೊದರಿನೊಳಗೆ ಬಿಸುಟನು.

ಮುಂದೆ ಐದಾರು ದಿನಗಳ ಮೇಲೆ ರಂಗನಾಥನು ಚಂದ್ರರಾಜನ ಮನೆಗೆ ಬಂದಾಗ, ಚಂದ್ರರಾಜನು ಪೊದರುಗಳೆಡೆಯಲ್ಲಿ ಏನನ್ನೋ ಹುಡುಕಿಕೊಂಡಿದ್ದನು.

ಏನು ಸಂಗತಿ ಎಂದು ಕೇಳಿದುದಕ್ಕೆ, ಹಣದ ಅಗತ್ಯ ಬಂದುದರಿಂದ ಎರಡು ದಿನಗಳಿಂದ ಹುಂಡೀ ಡಬ್ಬಿಯ ಬೀಗದ ಕೈ ಹುಡುಕುತ್ತಿದ್ದೇನೆಂದನು ಚಂದ್ರರಾಜ.

ಅದನ್ನು ಕೇಳಿ ರಂಗನಾಥನು ನಕ್ಕು, "ಈ ಎರಡು ದಿನಗಳಲ್ಲಿ ಆ ಹಣದ ಅಗತ್ಯವಿಲ್ಲದೆಯೇ ಕಳೆಯಿತಷ್ಟೆ ? ನಿನ್ನಲ್ಲಿರುವ ದೊಡ್ಡ ಲೋಪವೇನೆಂದರೆ, ಸಣ್ಣ ಪುಟ್ಟ ಅಗತ್ಯಗಳಿಗೂ ಭದ್ರವಾಗಿಟ್ಟ ಹಣವನ್ನು ತೆಗೆದುಬಿಡುವುದು. ಈ ಪೊದರಿನೊಳಗೆ ಆ ಸಣ್ಣ ಬೀಗದ ಕೈ ನಿನಗೆ ಕಾಣಲಿಕ್ಕೇ ಇಲ್ಲ. ಇನ್ನು ಕಷ್ಟಪಟ್ಟು ಪ್ರಯೋಜನವೂ ಇಲ್ಲ." ಎಂದನು.

ಚಂದ್ರರಾಜನು ಹೌದೆಂಬಂತೆ ನಿಟ್ಟುಸಿರುಬಿಟ್ಟು, "ಅಂತೂ ನೀನು ಪಟ್ಟುಬಿಡದೆ ನನ್ನಿಂದ ಉಳಿತಾಯ ಮಾಡಿಸಿಬಿಟ್ಟೆ" ಎಂದನು.





# ಮೋಸ ಹೋದ ಮೋಸಗಾರ

ಒಂದಾನೊಂದು ಗ್ರಾಮದಲ್ಲಿ ಒಬ್ಬ ರೈತನಿದ್ದ. ಅವನಿಗೆ ಮಗನೊಬ್ಬನ ಹೊರತು ಬೇರೆ ಮಕ್ಕಳಿರಲಿಲ್ಲ. ಆ ಮಗನು ಅಷ್ಟೇನೂ ಬುದ್ಧಿವಂತನಾಗಿರಲಿಲ್ಲ. ಹೇಗೋ ಅವನಿಗೆ ಮದುವೆಯಾಯಿತು. ಮನೆಗೆ ಬಂದ ಸೊಸೆ ಮಾತ್ರ ಬಹಳ ಬುದ್ಧಿವಂತ ಹುಡುಗಿ.

ಒಂದು ದಿನ ಬೆಳಿಗ್ಗೆ ರೈತನ ಮಗನು ಮನೆಯ ಮುಂದೆ ಕುಳಿತುಕೊಂಡು ಕೊಡಲಿಗೆ ಹಿಡಿಯನ್ನು ಕೆತ್ತಿ ಸರಿಮಾಡಿಕೊಂಡಿದ್ದನು. ಆಗ ಮೂವರು ರಾಜಭಟರಂಥವರು ಅವನ ಬಳಿಗೆ ಬಂದು, "ನಿನ್ನನ್ನು ನಮ್ಮ ಮಹಾರಾಜರು ಒಂದುಸಾರಿ ಬರಲಿಕ್ಕೆ ಹೇಳಿದ್ದಾರೆ. ಅವರು ಸಮುದ್ರ ರಾಜರು. ಈಗಲೇ ಬರಬೇಕು" ಎಂದರು.

ಸಮುದ್ರರಾಜನೆಂದರೆ ದೇವತೆಗಳ ಜಾತಿಗೆ ಸೇರಿದವನು. ಬಂದಿರುವ ಈ ಕುರೂಪಿಗಳಾದ ಮನುಷ್ಯರು ಕಪ್ಪಗೆ ವಿಕಾರವಾಗಿಯೇ ಕಾಣಿಸುತ್ತಾರೆ. ನಿಜಕ್ಕೂ ಅವನನ್ನು ಕರೆಯಲು ಬಂದವರು ರಾಕ್ಷಸ ರಾಜನ ದೂತರು. ಇದು ರೈತನ ಮಗನಿಗೆ ಗೊತ್ತಾಗಲಿಲ್ಲ.

"ನಿಮ್ಮ ಮಹಾರಾಜರಿಗೆ ನನ್ನೊಂದಿಗೆ ಏನು ಕೆಲಸ? ಅದೇನಾದರೂ ದೊಡ್ಡ ಕೆಲಸವೇ?" ಎಂದು ಅವನು ಕೇಳಿದನು.

"ಈ ದೇಶದಲ್ಲಿ ನಿನ್ನಷ್ಟು ಬುದ್ಧಿವಂತರು ಬೇರೆ ಯಾರೂ ಇಲ್ಲವಂತೆ. ನಮ್ಮ ದೇಶದಲ್ಲಿ ಯಾರಿಂದಲೂ ಮಾಡಲಾಗದ ಕೆಲಸವೊಂದನ್ನು ನಿನ್ನಿಂದ ಮಾಡಿಸಬೇಕೆಂದು ನಮ್ಮ ಮಹಾರಾಜರು ನಿನ್ನನ್ನು ಬರಲಿಕ್ಕೆ ಹೇಳಿದ್ದಾರೆ" ಎಂದರು ಅವರು.

"ಬುದ್ಧಿವಂತಿಕೆಯ ಕೆಲಸಕ್ಕೆ ನಾನಲ್ಲ, ನನ್ನ ತಂದೆ. ಬೇಕಾದರೆ ಅವರನ್ನು ನಿಮ್ಮ ದೇಶಕ್ಕೆ ಕರೆದುಕೊಂಡು ಹೋಗಿರಿ. ಅವರು ಈಗ ಗದ್ದೆಯ ಕಡೆಗೆ ಹೋಗಿದ್ದಾರೆ. ಕರೆದರೂ ಬಾರರು. ಹೊತ್ತು ಮುಳುಗಿ ಕತ್ತಲೆಯಾದಮೇಲಷ್ಟೆ ಮನೆಗೆ ಬರುತ್ತಾರೆ" ಎಂದನು ರೈತನ ಮಗ.

"ಹಾಗಾದರೆ ನೀನೂ ಅವರೂ ಕೂಡಿಯೇ ಬಂದುಬಿಡಿ. ನಾವು ಮತ್ತೆ ನಿಮಗಾಗಿ ಬರುವುದಿಲ್ಲ. ನಮ್ಮ ಹಡಗು ರೇವಿನಲ್ಲಿದೆ. ನಾಳೆ ಬೆಳಿಗ್ಗೆ ನೀವು ರೇವಿಗೆ ಬಂದರೆ ನಿಮ್ಮನ್ನು ನಮ್ಮ ದೇಶಕ್ಕೆ ಕರೆದು



ಕೊಂಡು ಹೋಗುತ್ತೇವೆ" ಎಂದು ಹೇಳಿ ಆ ಕಗ್ಗಿನ ಮನುಷ್ಯರು ಮೂವರೂ ಹೊರಟು ಹೋದರು.

ಆ ದಿನ ರಾತ್ರಿ ತಂದೆ ಮನೆಗೆ ಬಂದ ಮೇಲೆ ಮಗನು "ಅಪ್ಪಾ, ನಮಗಾಗಿ ಸಮುದ್ರರಾಜನು ಹಡಗನ್ನೂ ಆಳುಗಳನ್ನೂ ಕಳುಹಿಸಿದ್ದಾನೆ. ನಮ್ಮಿಂದ ಅವರಿಗೆ ಏನೋ ಒಂದು ಕೆಲಸ ಆಗಬೇಕಾಗಿದೆ ಯಂತೆ. ಅವರ ಆ ಕೆಲಸ ಮಾಡಿಕೊಟ್ಟರೆ ನಮಗೆ ಒಳ್ಳೆಯ ಬಹುಮಾನ ಸಿಕ್ಕುತ್ತದೆ ಅಪ್ಪಾ. ಅವರು ರೇವಿನಲ್ಲಿ ಕಾದಿದ್ದಾರೆ" ಎಂದನು.

"ಅವರು ಸಮುದ್ರರಾಜನ ಕಡೆಯಿಂದ ಬಂದವರು ಎಂಬುದಕ್ಕೆ ಏನಾದರೂ ಗುರುತು ತಂದಿದ್ದಾರೆಯೋ ?" ಎಂದು ರೈತನು ಮಗನನ್ನು ಕೇಳಿದನು.

"ಅಂಥಾದ್ದೇನೂ ತರಲಿಲ್ಲ. ಅವರು ಮತ್ತೆ ಬರುವುದಿಲ್ಲವಂತೆ. ನಾವು ನಾಳೆ ಬೆಳಿಗ್ಗೆ ರೇವಿನ ವರೆಗೆ ಹೋದರೆ, ಹಡಗಿನಲ್ಲಿ ಏರಿಸಿಕೊಂಡು ತಮ್ಮ ದೇಶಕ್ಕೆ ಹೋಗುತ್ತಾರಂತೆ" ಎಂದನು ಮಗ ತಂದೆ ಯೊಂದಿಗೆ.

"ರೇವಿನವರೆಗೆ ನಡೆಯುವುದೇ ? ನನ್ನಿಂದಾಗದು. ರೇವು ಬಹಳ ದೂರವಿದೆ. ದೂರವನ್ನು ತಗ್ಗಿಸಲು ಸಾಧ್ಯವಿದ್ದರೆ ಹೇಳು ಬರುತ್ತೇನೆ" ಎಂದು ಹೇಳಿ ರೈತನು ತನ್ನ ಕೆಲಸ ಮುಗಿಸಿ ತನ್ನ ಹಾಸಿಗೆ ಹಾಸಿ ಮಲಗಿಕೊಂಡನು.

ರೈತನ ಮಗನು ತನ್ನ ಹೆಂಡತಿಯೊಂದಿಗೆ ಸಮುದ್ರರಾಜನು ಕರೆದ ಸಮಾಚಾರವನ್ನು ಹೇಳಿ, "ನಾಳೆ ದಾರಿಯ ದೂರ ತಗ್ಗಿದರೆ ಹೊರತು ಅಪ್ಪಾ ಬರುವುದಿಲ್ಲ ಅನ್ನುತ್ತಾರೆ. ಅದು ಹೇಗೆ ಸಾಧ್ಯವಾದೀತು ?" ಎಂದನು.

ಅದನ್ನು ಕೇಳಿ ಅವನ ಹೆಂಡತಿ, "ದಾರಿಯ ದೂರ ತಗ್ಗಿಸಲು ಒಂದು ಉಪಾಯವಿದೆ. ನಡೆಯು ವಷ್ಟು ಹೊತ್ತು ಕಥೆ ಹೇಳಬೇಕು. ಹಾಗೆ ಮಾಡಿ ನೀವು ಮಾವಯ್ಯನನ್ನು ಕರೆದುಕೊಂಡು ಹೋಗಿರಿ. ಸಿಗುವ ಬಹುಮಾನ ಏಕೆ ಬಿಡಬೇಕು ?" ಎಂದು ಒಂದು ಕಥೆಯನ್ನು ಗಂಡನಿಗೆ ಹೇಳಿದಳು.

ರೈತನ ಮಗನು ತನ್ನ ಹೆಂಡತಿಯ ಬುದ್ಧಿವಂತಿಕೆಗೆ ಬಹಳ ಸಂತೋಷಪಟ್ಟನು. ಅವನು ಬೆಳಂಜಾಮ ದಲ್ಲೇ ಎದ್ದು ತಂದೆಯನ್ನು ಎಬ್ಬಿಸಿ, "ಅಪ್ಪಾ, ರೇವಿಗೆ ಹೋಗೋಣ ಬನ್ನಿ. ದಾರಿಯ ದೂರ ತಗ್ಗಿದರೆ ಬರುತ್ತೇನೆ ಅಂದಿರಷ್ಟೆ? ನಾನು ತಗ್ಗಿಸುತ್ತೇನೆ, ಬನ್ನಿ" ಎಂದನು.

ರೈತನೂ ಮಗನೂ ಸಮುದ್ರ ತೀರದ ಕಡೆಗೆ ಹೊರಟರು. ದಾರಿಯುದ್ದಕ್ಕೂ ಮಗನು ತಂದೆಗೆ ಒಳ್ಳೆಯ ಕಥೆ ಹೇಳುತ್ತಿದ್ದನು. ಹಾಗೆ ಅವರಿಬ್ಬರೂ ರೇವನ್ನು ತಲಪಿದರು. ರೇವಿನಲ್ಲಿ ಒಂದು ಕೀಳ್ತರ ಗತಿಯ ಹಡಗೂ ಮೂವರು ಕಗ್ಗಿನ ಮಂದಿಗಳೂ ಇದ್ದರು.



"ಇದೆಂಥ ಕೊಳಕು ಹಡಗೋ! ಎಂಥದೋ ರಾಕ್ಷಸರ ಹಡಗಿನ ಹಾಗಿದೆ?" ಎಂದನು ರೈತ.

ಕಪ್ಪಿನವರು ಅವನನ್ನು ನೋಡಿ, "ನಮ್ಮ ಮಹಾರಾಜರ ಹಡಗುಗಳಲ್ಲಿ ಇದರ ವೇಗವೇ ಜಾಸ್ತಿ. ಆದುದರಿಂದಲೇ ಇದನ್ನು ಕಳಿಸಿದ್ದಾರೆ!" ಎಂದರು.

ರೈತನೂ ಮಗನೂ ಅದರಲ್ಲಿ ಏರಿ ಕುಳಿತರು. ಕಪ್ಪಿನವರು ಹುಟ್ಟುಹಾಕುತ್ತ ಹಡಗನ್ನು ನಡೆಸ ತೊಡಗಿದರು. ಅದು ಸಾಧಾರಣ ಹಡಗಿನಂತೆಯೇ ಹೋಗುತ್ತ ಸ್ವಲ್ಪ ಹೊತ್ತಿಗೆ ಒಂದು ದ್ವೀಪವನ್ನು ತಲಪಿತು. ಆ ದ್ವೀಪದಲ್ಲಿ, ಎಲ್ಲಿಯೂ ಒಂದೇ ಒಂದು ಮರವೋ, ಗಿಡವೋ, ಪೊದೆಯೋ ಇರಲಿಲ್ಲ. ಬರೀ ಮಣ್ಣು ಕಲ್ಲುಗಳಿಂದ ಬೋಳಾಗಿ ಕಾಣುತ್ತಿತ್ತು. ರಾಕ್ಷಸರ ಲಂಕೆಯದು.

ಈ ನಿಜ ಸಂಗತಿ ರೈತನಿಗೂ, ಮಗನಿಗೂ ಗೊತ್ತಾಯಿತು. ಆದರೆ ಏನು ಮಾಡಲಿಕ್ಕೂ ಸಾಧ್ಯ ವಿರಲಿಲ್ಲ.

ಕಪ್ಪಿನವರು ತಂದೆ ಮಗಂದಿರನ್ನು ತೀರದಲ್ಲಿ ಇಳಿಸಿ ತಮ್ಮ ರಾಜನ ಬಳಿಗೆ ಕರೆದುಕೊಂಡು ಹೋದರು. ರಾಕ್ಷಸ ರಾಜನು ಇನ್ನಿಷ್ಟು ಕಪ್ಪಾಗಿ, ಅಸಹ್ಯವೆನಿಸುವಷ್ಟು ವಿಕಾರ ರೂಪದಲ್ಲಿದ್ದನು.

"ನಮ್ಮನ್ನು ಇಷ್ಟು ದೂರಕ್ಕೆ ಏತಕ್ಕೆ ಕರೆಯಿಸಿ ಕೊಂಡಿರಿ?" ಎಂದು ರೈತನು ರಾಕ್ಷಸ ರಾಜನನ್ನು ಕೇಳಿದನು.

"ಮತ್ತೇನಿಲ್ಲ. ನಮ್ಮ ಹತ್ತಿರ ದೊಡ್ಡದೊಂದು ಭಾಂಡವಿದೆ. ಅದರ ಕೆಳಗೆ ಬೆಂಕಿ ಹಾಕಬೇಕಾದರೆ ನಮ್ಮವರಿಗೆ ಸಾಧ್ಯವಾಗಲಿಲ್ಲ. ನೀವಿಬ್ಬರೂ ಅದರ ಕೆಳಗೆ ಬೆಂಕಿ ಉರಿಸಬೇಕು. ಆ ಕೆಲಸ ನಿಮ್ಮಿಂದಾಗ ದಿದ್ದರೆ ಜೀವದೊಂದಿಗೆ ನಿಮ್ಮನ್ನು ಹೋಗಲು ಬಿಡಲಾರೆ" ಎಂದನು ರಾಕ್ಷಸ ರಾಜ.

"ಓಹೋ! ಮೊದಲು ಆ ಭಾಂಡವು ಎಲ್ಲಿದೆ ಎಂದು ತೋರಿಸಿರಿ. ಉಳಿದ ಕೆಲಸ ನಾವು ನೋಡಿ ಕೊಳ್ಳುತ್ತೇವೆ" ಎಂದನು ರೈತ.

ರಾಕ್ಷಸರು ಅವರನ್ನು ದೊಡ್ಡದೊಂದು ಕೋಣೆ ಯೊಳಗೆ ಕರೆದುಕೊಂಡು ಹೋದರು. ಆ ಕೋಣೆಯ ನಡುವಿನಲ್ಲಿ ಎರಡಾಳಷ್ಟು ಎತ್ತರದ ತಾಮ್ರದ ಭಾಂಡವಿದ್ದಿತು. ರೈತನು ರಾಕ್ಷಸರನ್ನು ಕೋಣೆಯ ಹೊರಗೆ ಹೋಗಲು ಹೇಳಿ, ಬಾಗಿಲು ಮುಚ್ಚಿ ಅಗಳಿ ಹಾಕಿದನು. ಆಮೇಲೆ ತಂದೆ ಮಗಂದಿರಿಬ್ಬರೂ ಆ ಭಾಂಡದ ಸುತ್ತಲೂ ಒಂದು ತಿರುಗು ಹಾಕಿದರು.

ರೈತನು ತನ್ನ ಮಗನೊಂದಿಗೆ, "ಅಪ್ಪಾ, ಈ ಭಾಂಡದ ಸಂಗತಿ ನಿನಗೆ ಗೊತ್ತೇ? ಇದು ಅಕ್ಷಯ ಭಾಂಡ. ನಮ್ಮ ದೇಶದ ಮಹಾರಾಜರ ಮುತ್ತಾತ ರವರು ದಿನಾ ಇದರಲ್ಲಿ ಅನ್ನ ಮಾಡಿಸಿ ಕೇಳಿದವರಿ ಗೆಲ್ಲಾ ಇಲ್ಲವೆನ್ನದೆ ಅನ್ನದಾನ ಮಾಡುತ್ತಿದ್ದರು. ಅದನ್ನು ಈ ರಾಕ್ಷಸರು ಎತ್ತಿಕೊಂಡು ಬಂದು ಇಲ್ಲಿ ಇಟ್ಟುಕೊಂಡಿದ್ದಾರೆ" ಎಂದನು.



"ಈಗ ನಾವು ಈ ರಾಕ್ಷಸರೆಡೆಯಿಂದ ತಪ್ಪಿಸಿಕೊಂಡು ಹೋಗುವುದು ಹೇಗೆ ?" ಎಂದು ಮಗನು ತಳಮಳಿಸಿಕೊಂಡು ಕೇಳಿದನು.

"ಅದಕ್ಕೆ ಉಪಾಯ ನಾನು ನೋಡುತ್ತೇನೆ ಬಿಡು" ಎಂದು ರೈತನು ಕೋಣೆಯ ಬಾಗಿಲು ತೆರೆದು, "ಓಹೋಯ್" ಎಂದು ಕೂಗಿ ರಾಕ್ಷಸರನ್ನು ಕರೆದನು.

ಅವರು ಬಂದು, "ಭಾಂಡದ ಕೆಳಗೆ ಬೆಂಕಿ ಉರಿಸಿದಿರಾ ?" ಎಂದು ಕೇಳಿದರು.

"ಬೆಂಕಿ ಉರಿಸುತ್ತೇವೆ. ಗಾಳಿ ಊದಿದರೆ ಬೆಂಕಿ ಬರುತ್ತದೇನು ? ನೇರಳೆಯದು, ಮಾವಿನದು, ಹೊನ್ನೆಯದು, ಹುಣಿಸೆಯದು, ಅರಳಿಯದು, ಆಲದ್ದು, ಕರಿಮರದ್ದು, ತೇಗಿನದು, ಬಿದಿರಿನದು ಹೀಗೆ ಒಂಬತ್ತು ಮರಗಳ ಕಟ್ಟಿಗೆ ತನ್ನಿ. ಹತ್ತಿ, ಚಕಮುಕಿ ಕಲ್ಲು, ಕಬ್ಬಿಣದ ತುಂಡು ಕೂಡಾ ನೆನಪಿನಿಂದ ತನ್ನಿ. ಕ್ಷಣಮಾತ್ರದಲ್ಲಿ ಬೆಂಕಿ ಹಚ್ಚುತ್ತೇವೆ" ಎಂದನು ರೈತ.

ರಾಕ್ಷಸರು ತಮ್ಮ ರಾಜನ ಬಳಿಗೆ ಹೋಗಿ ರೈತನು ಹೇಳಿದ ಮಾತುಗಳನ್ನು ಹೇಳಿದರು. ರಾಕ್ಷಸ ರಾಜನು ಬಂದು, "ನಿಮಗೇನಾದರೂ ಬುದ್ಧಿ ಕೆಟ್ಟಿದೆಯೆ ? ನಮ್ಮ ಈ ಲಂಕೆಯಲ್ಲಿ ಹುಲ್ಲುಗರಿಕೆ ಕೂಡಾ ಮೊಳೆಯುವುದಿಲ್ಲ. ಮರಗಿಡ ಎಂಬ ಹೆಸರೇ ಇಲ್ಲ, ಕಟ್ಟಿಗೆ ಹೇಗೆ ಬಂದೀತು ?" ಎಂದು ಹೇಳಿದನು.

"ನಿಮ್ಮ ದೇಶದಲ್ಲಿಲ್ಲದೆ ಹೋದರೆ ನಮ್ಮ ದೇಶದಲ್ಲಿ ಬೇಕಾದಷ್ಟು ಕಟ್ಟಿಗೆಗಳಿವೆ. ಮನೆಯಲ್ಲಿ ನನ್ನ ಸೊಸೆ ಇದ್ದಾಳೆ. ನಿಮ್ಮ ಆಳುಗಳನ್ನು ಕಳುಹಿಸಿ, ಅವಳನ್ನು ಕೇಳಿ ತೆಗೆದುಕೊಂಡು ಬರಲು ಹೇಳಿ. ನಿಮ್ಮ ಆಳುಗಳ ಜೊತೆಯಲ್ಲಿ ನಿಮ್ಮ ಇಬ್ಬರು ಮಗಂದಿರನ್ನೂ ಕಳುಹಿಸದಿದ್ದರೆ ಅವಳು ನಂಬಲಾರಳು" ಎಂದನು ರೈತ.

"ಅವರು ಕಟ್ಟಿಗೆ ತರುವವರೆಗೂ ನೀವು ಈ ಕೋಣೆಯಲ್ಲೇ ಇರಬೇಕು" ಎಂದು ರಾಕ್ಷಸ ರಾಜನು ತಂದೆ ಮಗಂದಿರನ್ನು ಭಾಂಡವಿರುವ ಕೋಣೆಯಲ್ಲೇ ಬಂಧಿಸಿ, ತನ್ನ ಮಗಂದಿರನ್ನೂ, ಹಡಗು ನಡೆಸುವವರನ್ನೂ ರೈತನಿರುವ ದೇಶಕ್ಕೆ ಕಳುಹಿಸಿದನು.

ರಾಕ್ಷಸ ರಾಜನ ಮಗಂದಿರು ರೈತನ ಮನೆಗೆ ಬಂದು, ಅಲ್ಲಿರುವ ಸೊಸೆಯೊಂದಿಗೆ, "ನಾವು ರಾಕ್ಷಸ ರಾಜನ ಮಗಂದಿರು. ನಿನ್ನ ಮಾವಯ್ಯ ಮತ್ತು ಗಂಡ ನಮ್ಮ ದೇಶದಲ್ಲಿದ್ದಾರೆ. ನಿನ್ನನ್ನು ಕೇಳಿ ಒಂಬತ್ತು ಬಗೆಯ ಮರಗಳ ಕಟ್ಟಿಗೆಗಳನ್ನು ತೆಗೆದುಕೊಂಡು ಹೋಗಲು ಬಂದಿದ್ದೇವೆ" ಎಂದು ಆ ಮರಗಳ ಹೆಸರುಗಳನ್ನು ಹೇಳಿ, ಚಕಮುಕಿ ಕಲ್ಲು, ಹತ್ತಿ, ಕಬ್ಬಿಣದ ತುಂಡುಗಳನ್ನೂ ಕೊಡುವಂತೆ ಕೇಳಿದರು. "ಕೇಳಿದ ಕೂಡಲೇ ನೀನು ಕೊಡುವೆಯೆಂದು ಹೇಳಿದ್ದಾರೆ, ಕೂಡಲೇ ಕೊಡು" ಎಂದು ಅವಸರಪಡಿಸಿದರು.

ದೊಡ್ಡ ಮೋಸ ನಡೆದಿದೆ ಎಂದು ರೈತನ ಸೊಸೆಗೆ ಗೊತ್ತಾಯಿತು. ಅವಳು ರಾಕ್ಷಸ ರಾಜನ ಮಗಂದಿರೊಂದಿಗೆ, "ನಿಮಗೆ ಬೇಕಾದುದೆಲ್ಲಾ ಆ ಕತ್ತಲೆಯ ಕೋಣೆಯಲ್ಲಿವೆ. ನಿಮಗೆ ಬೇಕಾದಷ್ಟು ಧಾರಾಳವಾಗಿ ತೆಗೆದುಕೊಂಡು ಹೋಗಿರಿ" ಎಂದು ಹೇಳಿದಳು.

ಸರಿಯೆಂದು ಅವರು ಆ ಕತ್ತಲೆ ಕೋಣೆಯೊಳಗೆ ಪ್ರವೇಶ ಮಾಡಿದರು. ಕೂಡಲೇ ರೈತನ ಸೊಸೆ ಕತ್ತಲೆ ಕೋಣೆಯ ಬಾಗಿಲನ್ನು ಮುಚ್ಚಿ ದೊಡ್ಡದೊಂದು ಅಂಡೆ ಬೀಗವನ್ನು ಹಾಕಿದಳು. ಅವಳು ಹೊರಗೆ ಬಂದು ಅಲ್ಲಿರುವ ರಾಕ್ಷಸ ರಾಜನ ಆಳುಗಳೊಂದಿಗೆ, "ನಿಮ್ಮ ರಾಜರ ಕುಮಾರರಿಬ್ಬರೂ ನಮ್ಮ ಕತ್ತಲೆ ಕೋಣೆಯೊಳಗೆ ಇದ್ದಾರೆ. ಎಷ್ಟು ಹುಡುಕಿದರೂ ಬೀಗದ ಕೈ ಎಲ್ಲಿದೆಯೋ ಕಾಣುವುದಿಲ್ಲ. ನಮ್ಮ ಮನೆಯವರಿಬ್ಬರೂ ಇಲ್ಲಿಗೆ ಬಂದು ಹುಡುಕಿದ ಹೊರತು ಅದು ಕಾಣಿಸಲಾರದೆಂದು ಹೋಗಿ ನಿಮ್ಮ ರಾಜನೊಂದಿಗೆ ಹೇಳಿರಿ. ಯಾರು ಒಳಗೆ ಹೋದರೂ ಆ ಬೀಗ ಬೀಳುತ್ತೆ. ಅದರ ಕೈ ಇರುವ ಜಾಗ ಅವರಿಗೇ ಗೊತ್ತು" ಎಂದಳು.

ರಾಕ್ಷಸನ ಆಳುಗಳು ಹಡಗಿನಲ್ಲಿ ಕುಳಿತು ತಮ್ಮ ಲಂಕೆಗೆ ಹೋಗಿ, ರೈತನ ಸೊಸೆ ಹೇಳಿದ ಮಾತುಗಳನ್ನು ತಮ್ಮ ರಾಜನೊಂದಿಗೆ ಹೇಳಿದರು.

ರಾಕ್ಷಸ ರಾಜನು ಹಲ್ಲುಗಳನ್ನು ಕಡಿದುಕೊಂಡನು, ಆದರೆ ಏನು ಮಾಡಲಿಕ್ಕೂ ಅವನಿಂದಾಗಲಿಲ್ಲ. ಕಾಗೆಯ ಮರಿ ಕಾಗೆಗೆ ಮುದ್ದು ತಾನೇ? ಅವನು ತನ್ನ ಮಗಂದಿರನ್ನು ಬೇಗನೇ ತರಿಸಿಕೊಳ್ಳುವ ಆತುರದಿಂದ ರೈತನನ್ನೂ, ರೈತನ ಮಗನನ್ನೂ ಬಂಧನದಿಂದ ಬಿಡುಗಡೆ ಮಾಡಿ, ಹಡಗಿನಲ್ಲಿ ಹೋಗುವಂತೆ ಹೇಳಿದನು.

"ನಾವು ನಿನ್ನ ಕೆಲಸ ಮುಗಿಸಿ ಬಹುಮಾನ ಪಡೆಯದೆ ಹೋಗಲಾರೆವು. ಒಮ್ಮೆ ಹೋಗಿಬಿಟ್ಟರೆ ಮತ್ತೆ ಎಂದೂ ಈ ಬೋಳು ಲಂಕೆಗೆ ಬರಲಾರೆವು, ಬೇರೆ ಕಡೆಯಿಂದ ಕಟ್ಟಿಗೆಗಳನ್ನು ತರಿಸಿಬಿಡು. ನಿನ್ನ ಮಗಂದಿರು ಕತ್ಲೇ ಕೋಣೆಯೊಳಗೆ ಏಕೆ ಹೋಗಬೇಕಿತ್ತು? ಹಾಗೆ ಹೋಗುವಾಗ ಬೆಳಕು ತರಲು ಹೇಳಬೇಕೆನ್ನಲು ಅವರಿಗೆ ಬಾಯಿ ಬರಲಿಲ್ಲವೆ?" ಎಂದನು ರೈತ.

ರಾಕ್ಷಸ ರಾಜನು ಅವರಿಗೆ ಒಂದು ಚೀಲ ಬಂಗಾರದ ಗಟ್ಟಿಗಳನ್ನು ಬಹುಮಾನ ಕೊಟ್ಟನು. ಆಮೇಲೆ ಹಡಗಿನಲ್ಲಿ ರೈತನನ್ನೂ, ಅವನ ಮಗನನ್ನೂ ಅವನ ದೇಶದಲ್ಲಿ ಬಿಟ್ಟು, ತನ್ನ ಮಗಂದಿರನ್ನು ಕರೆಯಿಸಿಕೊಂಡನು ಆ ರಾಕ್ಷಸ ರಾಜ.

ಅಂದಿನಿಂದ ರೈತನೂ, ಅವನ ಮಗ ಸೊಸೆಯರೂ ಸುಖವಾಗಿ ಜೀವಿಸಿಕೊಂಡಿದ್ದರು.



## ಪಕ್ಷಿಗಳು, ಪ್ರಾಣಿಗಳು

ದಕ್ಷಿಣ ಆಫ್ರಿಕಾದಲ್ಲಿರುವ ಒಂದು ಜಾತಿಯ ಕರಡಿಗಳಿಗೆ ಕಣ್ಣುಗಳ ಸುತ್ತಲೂ ಕನ್ನಡಕದ ಹಾಗೆ ಒಂದು ಬಗೆಯ ಬಾರೆಗಳಿವೆ. ಆದುದರಿಂದ ಅವುಗಳನ್ನು ಕನ್ನಡಕ ಕರಡಿ ಅನ್ನುತ್ತಾರೆ.

### ವಿಚಿತ್ರ ಸುಲೋಚನಗಳು





## ಅಪಾಯ!

ಸಮುದ್ರದ ಹುಲಿದುಂಬಿಗಳೆಂದು ಹೇಳಲ್ಪಡುವ ಆಸ್ಟ್ರೇಲಿಯನ್ ಬಾಕ್ಸ್ ಜೆಲ್ಲೀ ಅತ್ಯಂತ ಅಪಾಯಕರವಾದ ಜೆಲ್ಲೀ ಮೀನು. ಅದರ ಶರೀರದಿಂದ ಸುಮಾರು ನಾಲ್ಕು ಕೋಟಿ ದಾರಗಳಂತಹ ರಾಶಿಗಳು ನೇತಾಡುತ್ತಿರುತ್ತವೆ. ಅವು ಮನುಷ್ಯನನ್ನು ಎರಡು ಮೂರು ನಿಮಿಷಗಳಲ್ಲಿ ಕೊಲ್ಲುವಂಥವು !

ಕಂಬಳಿ ಹುಳುವಿನ ಶರೀರದಲ್ಲಿ ಸುಮಾರು ೨,೦೦೦ ಖಂಡಗಳಿರುತ್ತವೆ. ಮನುಷ್ಯನ ಶರೀರದಲ್ಲಿರುವುದು ಕೇವಲ ೭೦೦ ಖಂಡಗಳು ಮಾತ್ರವೇ !



### ಖಂಡಗಳ ಸಮೂಹ

# ಮರಳಿ-ಹೊರಳಿ ನೋಡಿದೆ ಜಗತ್ತು
# ಸುಪರ್ ರಿನ್ ಹೊಳಪಿನ ಮಹತ್ತು.




**ಮಿಂಚಿನಂತಹ ಸುಪರ್ ರಿನ್ ಅಧಿಕ ಬಿಳುಪು**

ಬೇರೆ ಯಾವುದೇ ಡಿಟರ್ಜಂಟ್ ಬಿಲ್ಲೆ ಅಥವಾ ಬಾರ್‌ಗಿಂತ ಅಧಿಕ ಬಿಳುಪು.

ಹಿಂದುಸ್ತಾನ್ ಲೀವರ್ ಅವರ ಉತ್ಕೃಷ್ಟ ಉತ್ಪಾದನೆ

LINTAS RIN 97 2016 KN

## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೬ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



A. V. Rangaiah



A. V. Rangaiah

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಜೂನ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

## ಏಪ್ರಿಲ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಎಳೆಯುವಳಿಗೇಕಿದೆ ಮಹಾಭಾರ?

ಎರಡನೇ ಫೋಟೋ : ಬೆಳೆದವನಿಗೆ ಪಾಪ, ತಲೆಯೊಳಗೂ ಭಾರವೇ?

ಕಳುಹಿಸಿದವರು : ಕುಮಾರಿ ಎಸ್. ಅನುಪಮಾ, ೬೮, ನಾಲ್ಕನೇ ಮೈನ್ ರೋಡು, ಬೆಂಗಳೂರು-೩.

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.